ಶಾರದಾ ಸಾಹಿತ್ಯ ಮಾಲೆ – ೩೯

# ಸೀತಾ-ರತ್ನ

## ಹನ್ನೊಂದು ಕಥೆಗಳ ಸಂಗ್ರಹ

ಲೇಖಕರು:
ಎಂ. ರಮಾನಂದ ಘಾಟೆ

ಮುದ್ರಣ ಮತ್ತು ಪ್ರಕಾಶನ:
ಶಾರದಾ ಪ್ರಕಟನಾಲಯ
ಅರಳೇಪೇಟೆ, :: ಬೆಂಗಳೂರು – ೨.

# ಮುನ್ನುಡಿ

"ಸೀತಾ-ರತ್ನ" ಎಂಬ ಈ ಸುಂದರತಮ ಕಥಾಸಂಕಲನವನ್ನೂ ಇದರ ಹಿಂದಿನ ಕಥಾಸಂಗ್ರಹವಾದ "ಕಾನ್ಸೆಂಟ್ ಗರ್ಲ್"-ಅನ್ನೂ ರಚಿಸಿರುವ ಮಂಗಳೂರಿನ ಶ್ರೀಯುತ ರಮಾನಂದ ಘಾಟಿಯವರ ಮುಖ ಪರಿಚಯ ನನಗಿಲ್ಲ. ಆದರೂ, ಶ್ರೀಯುತ ಘಾಟಿಯವರ ಮತ್ತು ಇದನ್ನು ಪ್ರಕಟಿಸಿರುವ ಬೆಂಗಳೂರಿನ "ಶಾರದಾ ಪ್ರಕಟನಾಲಯ"ದ ಒಡೆಯರಾದ ನನ್ನ ಮಿತ್ರರು ಶ್ರೀ ಆರ್ ಬಸವರಾಜು-ಅವರ ಬಯಕೆಗೆ ಸೋತು-ಇಲ್ಲಿ ಶ್ರೀಯುತ ಘಾಟಿಯವರ ಹಾಗೂ ಅವರ ಕಥೆಗಳ ವಿಷಯವಾಗಿ ನಾಲ್ಕು ಮಾತುಗಳನ್ನು ಹೇಳುತ್ತೇನೆ.

ಶ್ರೀಯುತ ರಮಾನಂದ ಘಾಟಿಯವರ ಹೆಸರನ್ನು ನಾನು ಮೊದಲು ಕೇಳಿದ್ದು ಸುಮಾರು ಒಂದು ವರ್ಷದ ಹಿಂದೆ. ಇವರ ಮೊದಲ ಪುಸ್ತಕವಾದ (ಅದೂ "ಶಾರದಾ ಪ್ರಕಟನಾಲಯ"ದವರಿಂದಲೇ ಪ್ರಕಟವಾದದ್ದು)-"ಕಾನ್ಸೆಂಟ್ ಗರ್ಲ್" ಎಂಬ ಕಥಾಸಂಗ್ರಹವು-ಒಂದು ಸಂದರ್ಭದಲ್ಲಿ ಆಕಸ್ಮಿಕವಾಗಿ ನನ್ನ ಕೈಗೆ ಸಿಕ್ಕಿತು. ತೊಂಬತ್ತೆಂಟು ಪುಟಗಳ ಆ ಚಿಕ್ಕ ಪುಸ್ತಕವನ್ನು ಸಿಕ್ಕಲ್ಲಿಯೇ ಕುಳಿತು ಓದಿ ಮುಗಿಸಿದೆ. ನನ್ನ ಮಟ್ಟಿಗೆ ಆ ಕಥಾ ಸಂಗ್ರಹ, "ಪ್ರಥಮಾವಲೋಕನದ ಪ್ರೇಮ" (Love at first sight) ಎಂಬಂತಾಯಿತು. ಅಂದು ನನ್ನ ಜೊತೆಯಲ್ಲಿದ್ದ ಶ್ರೀ ತ. ರಾ. ಸು. ರವರು (ಇವರು ಯಾರೆಂದು ಪ್ರತ್ಯೇಕ ಹೇಳಬೇಕೇನು ?) ನಾನು ಆ ಪುಸ್ತಕವನ್ನು ನೋಡುತ್ತಿದ್ದುದನ್ನು ನೋಡಿ "He is a serious competitor to you, Anand !" ಎಂದು ಸ್ವಲ್ಪ ಚಡಾಯಿಸುವ ಧ್ವನಿಯಲ್ಲಿ ಹೇಳಿದರು. ಅಂದ ಮೇಲೆ, ಅವರ (ಶ್ರೀ ತ. ರಾ. ಸು. ರವರ) ಭಾವನೆಯಲ್ಲಿ ನನ್ನ ಬರಡು ಬರೆಹ ಗಳೂ ಬೇರೊಬ್ಬರಿಂದ competition-ಗೆ ಯೋಗ್ಯವೆಂಬುದು ಪೂರ್ವಪಕ್ಷವಷ್ಟೆ ? ಇದೂ ಶ್ರೀಯುತರ ಬಾಯಿಂದ ನನಗೆ ಒಂದು ರೀತಿಯಲ್ಲಿ ಶಹಬಾಸುಗಿರಿಯೇ ಎಂದು ನಾನು ತೆಗೆದುಕೊಳ್ಳಬೇಕು. ಆದರೆ, "ಕಾನ್ಸೆಂಟ್ ಗರ್ಲ್"ಅನ್ನು

ಓದಿದಮೇಲೆ, ನನ್ನ ಗ್ರಹಿಕೆಯಲ್ಲಿ – ಪ್ರಕಾರಾಂತರವಾಗಿಯಾದರೂ ಶ್ರೀಯುತರ ಶಹಬಾಸುಗಿರಿಗೆ ನಾನು ಯೋಗ್ಯನಲ್ಲ ಎಂದು ಸ್ಪಷ್ಟವಾಯಿತು. "ಅಯ್ಯಾ ಮಿತ್ರಾ, ಪುಸ್ತಕ ಓದಿದೆ. ನಿನ್ನ ಮಾತು ನನಗೆ ಬೆನ್ನು ತಟ್ಟುವಂತಹುದಾದರೂ ಇದರ ಕರ್ತೃವಿಗೆ ಅನ್ಯಾಯ ಮಾಡಿದಂತೆ!" ಎಂದೆ. "ಹೇಗೆ?" ಎಂದು ಅವರು ಕೇಳಿದರು.

"ಅಷ್ಟಲ್ಲದೆ ಏನು? ಗುಬ್ಬಚ್ಚಿಯೊಡನೆ ಗರುಡನ ಪೈಪೋಟಿ ಎಂದರೆ, ಗುಬ್ಬಚ್ಚಿಗೆ ಹೆಮ್ಮೆಯಾಗಬಹುದು, ಆದರೆ ಗರುಡನಿಗೆ ತಕ್ಕ ಗೌರವ ಸಲ್ಲಿಸಿದ ಹಾಗಾಗಲಿಲ್ಲ!" – ಎಂದೆ. ಈ ಮಾತು ಅಂತಃಕರಣಪೂರ್ವಕವಾಗಿ ಸತ್ಯ ವಾದದ್ದು.

"ಕಾನ್ವೆಂಟ್ ಗರ್ಲ್"ಅನ್ನು ಓದಿದಕೂಡಲೆ, ಅದರ ಪ್ರಕಾಶಕರಿಗೆ ಒಂದು ಕಾರ್ಡು ಬರೆದೆ. ಕನ್ನಡದಲ್ಲಿ ಇಂತಹ ಸೊಗಸಾದ ಪುಸ್ತಕವನ್ನು ಪ್ರಕಟಿಸಿದ್ದಕ್ಕಾಗಿ ಅವರಿಗೆ ಧನ್ಯವಾದಗಳನ್ನರ್ಪಿಸಿ – ಶ್ರೀಯುತ ಘಾಟೆಯವರ ಉಳಿದ ಕೃತಿ ಗಳನ್ನೂ ಪ್ರಕಟಿಸಬೇಕೆಂದು ತಿಳಿಸಿ ಬರೆದೆ. ಅದರಂತೆ, ಪ್ರಕಾಶಕರು ಈಗ ಶ್ರೀಯುತ ಘಾಟೆಯವರ ಎರಡನೆ ಪುಸ್ತಕವಾದ ಈ "ಸೀತಾ – ರತ್ನ"ವನ್ನು ಪ್ರಕಟಿಸಿದ್ದಾರೆ.

ಒಂದು ಸಾಮಾನ್ಯ ಸಂಸಾರದ ನಿತ್ಯಜೀವನದಲ್ಲಿ ಉಂಟಾಗಬಹುದಾದ ಘಟನೆಗಳನ್ನೇ ತೆಗೆದುಕೊಂಡು ಶ್ರೀಯುತ ಘಾಟೆಯವರು, ಒಂದೊಂದರ ಸುತ್ತಲೂ ಅತ್ಯಂತ ಸೊಗಸಾದ ಕಥೆಗಳನ್ನು ಕಟ್ಟಿದ್ದಾರೆ ಕಥನದಲ್ಲಿ "ಪ್ರಥಮ ಪುರುಷ ಏಕವಚನ" (first person singular) ತಂತ್ರವನ್ನು – ಅಂದರೆ, ಕಥಾನಾಯಕನೇ ಕಥೆಯನ್ನು ಹೇಳುವ ತಂತ್ರವನ್ನು ಬಳಸಿಕೊಂಡು ಕಥೆ ಗಳನ್ನು ರಚಿಸುವುದರಿಂದ, ಅವುಗಳಲ್ಲಿ ಒಂದು ಅಪೂರ್ವ ರುಚಿ ತೋರುತ್ತದೆ. ಈ ರಹಸ್ಯವನ್ನು ಶ್ರೀಯುತ ಘಾಟೆಯವರು ಚೆನ್ನಾಗಿ ಬಲ್ಲರೆಂದು ಅವರ ಎರಡು ಪುಸ್ತಕಗಳಿಂದಲೂ ವ್ಯಕ್ತವಾಗುತ್ತದೆ.

ಕಥಾನಾಯಕಿ ಕಾನ್ವೆಂಟ್ ಒಂದರ ವಿದ್ಯಾರ್ಥಿನಿ ಸೀತಾ. ಆಕೆಯ ನಾಯಕನೇ ಕಥಾನಾಯಕ – ಕಥೆ ಹೇಳುವವನೂ ಅವನೇ. "ಕಾನ್ವೆಂಟ್ ಗರ್ಲ್" – ನಲ್ಲಿ ಇವರ ವಿವಾಹ ಮೊದಲುಗೊಂಡು, ಇವರ ತರುಣ ಸಂಸಾರದ

ಹತ್ತು ರಸವತ್ತಾದ ಕಥೆಗಳಿವೆ. " ಸೀತಾ – ರತ್ನ"ದಲ್ಲಿ ಇದೇ ಸರಣಿಯ ಹನ್ನೊಂದು ಅಷ್ಟೇ ರಸವತ್ತಾದ ಕಥೆಗಳಿವೆ.

ಈ ಇಪ್ಪತ್ತೊಂದು ಕಥೆಗಳಿಂದ ಸ್ಪಷ್ಟವಾಗುವ ಒಂದು ವಿಷಯವೆಂದರೆ – ಶ್ರೀಯುತ ಘಾಟೆಯವರ ರಕ್ತನಾಳಗಳಲ್ಲಿ ಕೆಂಪು - ಬಿಳುಪು ರಕ್ತಕಣಗಳೊಡನೆ - ಸಮ ಸಮ ಹಾಸ್ಯಕಣಗಳೂ ಇವೆ – ಎಂಬುದು !

ಪ್ರಕಾಶಕರು, " ಕಾನ್ವೆಂಟ್ ಗರ್ಲ್" – ನ ರಕ್ಷಾಕವಚದ ಹಿಂಬದಿಯಲ್ಲಿ ಕಥೆಗಾರರ ಪರಿಚಯ ಮಾಡಿಕೊಡುತ್ತ – ಅವರು ರಚಿಸಿರುವ " ಸೀತೆ "ಯ ಪಾತ್ರ ಕನ್ನಡ ಸಾಹಿತ್ಯದಲ್ಲಿ ಚಿರಂಜೀವಿಯಾಗಿ ನಿಲ್ಲತಕ್ಕುದೆಂದು ತಿಳಿಸಿದ್ದಾರೆ. "ಕಾನ್ವೆಂಟ್ ಗರ್ಲ್"–ಅನ್ನೂ " ಸೀತಾ–ರತ್ನ"ವನ್ನೂ ಓದಿದವರಿಗೆ–ಈ ಮಾತು ಅತ್ಯುಕ್ತಿಯಲ್ಲವೆಂದು ತೋರುವುದರಲ್ಲಿ ಸಂದೇಹವಿಲ್ಲ.

" ಆಹಾ ! ದೇವಶಿಲ್ಪಿಯು ಹೆಣ್ಣಿನ ಆಕೃತಿಯಲ್ಲಿ ಏರಿಳಿಯುವ – ಉಬ್ಬು ತಗ್ಗುಗಳ, ಡೊಂಕು ಬೊಂಕುಗಳ ವಕ್ರರೇಖೆಗಳನ್ನು ಅದೆಷ್ಟು ನಯನ ಮನೋಹರವಾಗಿ – ಚಿತ್ತಾಕರ್ಷಕವಾಗಿ ಅಳವಡಿಸಿದ್ದಾನೋ ಅಷ್ಟೇ ಜಟಿಲ ವಾಗಿ – ಗೋಸುಂಬೆಯಂತೆ ದಿಗ್ಭ್ರಾಂತಿಕಾರಕವಾಗಿ ಜೋಡಿಸಿದ್ದಾನೆ ಅವಳ ಮನೋಮಯಾಕೃತಿಯನ್ನು ! ಅವರ ಮನಸ್ಸು ಒಮ್ಮೆ ವಜ್ರಕ್ಕಿಂತಲೂ ಕಠಿಣ, ಇನ್ನೊಮ್ಮೆ ಕುಸುಮಕ್ಕಿಂತಲೂ ಕೋಮಲ. ಅವರ ಉತ್ಸಾಹಕ್ಕೆ ಮಿತಿಯಿಲ್ಲ, ಅವರ ತೆಗಳಿಕೆಗೆ ಎಣೆಯಿಲ್ಲ. ತಿಂಗಳ ಬೆಳಕನ್ನು ಚುಮುಕಿಸುವ ಅವರ ಕಣ್ಣುಗಳೇ ಉರಿಬಿಸಿಲನ್ನೂ ಕಾರಬಲ್ಲವು ಒಲಿದ ನಾರಿಯ ಕೊರಳ ಕೊಳಲಿನ ಸೌಮ್ಯ ಸರಿಯ ಪರಿಯೇನು ! ಮುನಿದ ಮಾನಿನಿಯ ಬರಿಯ ರೌದ್ರ ವಜ್ರಾಘಾತದ ಕಿಡಿಯೇನು ! ಅವರ ಒಲವೋ, ಅಪಾರ ಗಭೀರ ಸಾಗರ, ಅವರ ತಿರಸ್ಕಾರವೋ ಅಭೇದ್ಯ – ಅಚಲ ಪರ್ವತ ಪಂಜ್ತ್ರ. ಅವರ ಕುತೂಹಲಕ್ಕೆ ತಡೆಯಿಲ್ಲ, ಅವರ ಔದಾಸೀನ್ಯಕ್ಕೆ ಕಡೆಯಿಲ್ಲ. ಅವರ ಸ್ಥೂಲಾ ಕೃತಿ ವಕ್ರಮನೋಹರ, ಅವರ ಸೂಕ್ಷ್ಮಾಕೃತಿ ಜಟಿಲ – ದಿಗ್ಭ್ರಾಂತಿಕರ !...." ಎಂದು ನನ್ನ " ಸಂಸಾರ ಶಿಲ್ಪ "ದ ಕಥಾನಾಯಕ " ಪದ್ಮಪಾಕ "ದಲ್ಲಿ ಸಂಕ್ಷೇಪ ವಾಗಿ ಹೇಳುತ್ತಾನೆ. "....ಒಂದೊಂದು ಹೊತ್ತಿನಲ್ಲಿ – ಒಂದೊಂದು ಬೆಳಕಿನಲ್ಲಿ – ಒಂದೊಂದು ನಿಲುವಿನಲ್ಲಿ – ಒಂದೊಂದು ಮುಖದಿಂದಲೂ ಅಪೂರ್ವವಾದ – ಅತ್ಯಾಶ್ಚರ್ಯಕರವಾದ - ವಿಸ್ಮಯಕಾರಕವಾದ - ಆದರೂ ಅತಿ ರಮಣೀಯವಾದ -

ಹೊಸ ಹೊಸ ವರ್ಣಲೀಲೆಯಿಂದಲೂ ಕಾಂತಿಯಿಂದಲೂ ಕಣ್ಣನ್ನು ಕೋರೈಸು ವಂತಹ – ಅನರ್ಘ್ಯ ಸುಂದರ ಸಹಸ್ರಪಟ್ಟೆ ವಜ್ರದಂತೆ – ಕೆಲವು ಹೆಣ್ಣುಗಳು! ಈ ಪ್ರಪಂಚದಲ್ಲಿ ಅಂತಹವರನ್ನು ಪೂರ್ತಿ ವರ್ಣಿಸುವುದಕ್ಕೆ ಸಾಕಾದ ಮಾತು ಗಳಿಲ್ಲ – ಚಿತ್ರಿಸುವುದಕ್ಕೆ ಬೇಕಾದ ವರ್ಣಗಳಿಲ್ಲ!" – ಎಂದು ಬೇರೊಂದು ಕಥೆಯಲ್ಲಿ ಹೇಳುತ್ತಾನೆ – "ಸಂಸಾರ ಶಿಲ್ಪ"ದ ನಾಯಕನ ಗೆಳೆಯ ರಘುಪತಿ.

ಹೆಣ್ಣನ್ನು ಕುರಿತು ಯಾವ ಅಭಿಪ್ರಾಯವನ್ನು ನಾನು ಪ್ರಾಸಂಗಿಕವಾಗಿ ಹಾಗೂ ಸಂಕ್ಷೇಪವಾಗಿ ಎರಡು ಪಾತ್ರಗಳ ಬಾಯಲ್ಲಿ ವ್ಯಕ್ತಪಡಿಸಿರುವೆನೋ ಅದನ್ನು ನನ್ನ ಮಿತ್ರರಾದ ಶ್ರೀ ರಮಾನಂದ ಘಾಟಿಯವರು – ಸೊಗಸಾದ ಕಥೆ ಗಳ ರೂಪದಲ್ಲಿ – ಅತ್ಯಂತ ರಸವತ್ತಾಗಿ ವಿಸ್ತರಿಸಿ ಕನ್ನಡಿಗರಿಗೆ ನೀಡಿದ್ದಾರೆ.

ಶ್ರೀ ಘಾಟಿಯವರ ಕಥೆಗಳನ್ನು ಓದದ ಕನ್ನಡಿಗರು ನಿಜವಾಗಿಯೂ ಅರಸಿಕರು!

"ಕಾನ್ವೆಂಟ್ ಗರ್ಲ್" – ಅನ್ನೂ – "ಸೀತಾ–ರತ್ನ"ವನ್ನೂ ಕನ್ನಡಿಗರೆನ್ನಿಸಿ ಕೊಂಡವರೆಲ್ಲರೂ ಅವಶ್ಯಕವಾಗಿ ಕೊಂಡು ಓದಬೇಕು – ಕೊಳ್ಳಲು ಸಾಧ್ಯ ವಿಲ್ಲವೊ? ಭಿಕ್ಷೆ ಬೇಡಿ ತಂದು ಓದಬೇಕು – ಅದೂ ಸಾಧ್ಯವಿಲ್ಲವೋ? ಎರವಲು ತಂದು ಓದಬೇಕು – ಅದಕ್ಕೂ ಸಿಕ್ಕದಿದ್ದರೆ – ಕಳವು ಮಾಡಿದರೂ ಸರಿಯೆ!

ಕಡೆಯದಾಗಿ, "ಗೋಪಾಲ ಭೇಷಜಾಶ್ರಮ"ದಲ್ಲಿ ಶ್ರೀಯುತ ಘಾಟಿ ಯವರು ನಡೆಸುತ್ತಿರುವ "ಕಾಂಪೌಂಡಿಂಗ್" ಕೆಲಸದ ಜೊತೆಗೆ, "ಸಾಹಿತ್ಯಾ ಶ್ರಮ"ದಲ್ಲಿ ಅವರ ಸುಂದರ ಕಥೆಗಳ "ಕಾಂಪೌಂಡಿಂಗ್" ಕೆಲಸವೂ ನಿರರ್ಗಳ ವಾಗಿ ಸಾಗಲಿ, ಅವರ ಕಥಾಸಂಕಲನಗಳನ್ನು "ಶಾರದಾ ಪ್ರಕಟನಾಲಯ" ದವರು ಬೇಗ ಬೇಗ ಪ್ರಕಟಿಸಲಿ ಎಂದು ಹಾರೈಸಿ – ನನ್ನ ಮಾತುಗಳನ್ನು ಮುಗಿಸುತ್ತೇನೆ.

೧೦೬೪/೫೨ ಸಿಮೆಂಟ್ ಬ್ಲಾಕ್
ಚಾಮುಂಡಿಪುರ
ಮೈಸೂರು.

ಆನಂದ
೨೨–೯–೧೯೫೪.

# ನಿವೇದನೆ

ಇದು ನನ್ನ ದ್ವಿತೀಯ ಕಥಾಸಂಕಲನ. ನನ್ನ ಪ್ರಥಮ ಕಥಾಸಂಕಲನ "ಕಾನ್ವೆಂಟ್ ಗರ್ಲ್"ಗೆ ಓದುಗರಿತ್ತ ಸ್ವಾಗತವೇ ಈ "ಸೀತಾ–ರತ್ನ"ದ ಪ್ರಕಟಣೆಯ ಪ್ರಯತ್ನಕ್ಕೆ ಹಿನ್ನೆಲೆಯಾಯಿತು.

ಈ ಸಂಗ್ರಹದಲ್ಲಿನ ಕತೆಗಳೆಲ್ಲವೂ–ನನ್ನ ಸಾಹಿತ್ಯ ಸೇವೆಯ ಪ್ರಮಾದ ಗಳು–ಆಗಾಗ್ಯೆ ವಾರಪತ್ರಿಕೆ, ಮಾಸಪತ್ರಿಕೆಗಳಲ್ಲಿ ಬೆಳಕನ್ನು ಕಂಡವುಗಳು. ಅವುಗಳ ಟಿಪ್ಪಣಿಯನ್ನು ಪ್ರತ್ಯೇಕವಾಗಿ "ಆಭಾರ ಮನ್ನಣೆ"ಯಾಗಿ ಸೂಚಿಸಿದ್ದೇನೆ.

ಹಿರಿಯ ಸಾಹಿತಿಗಳಾದ ಶ್ರೀ "ಆನಂದ"ರು ನನ್ನ ಮನವಿಯನ್ನು ಮನ್ನಿಸಿ, ಈ ಸಂಗ್ರಹಕ್ಕೆ ಮುನ್ನುಡಿಯನ್ನು ಬರೆದು, ಸಂಗ್ರಹದ ಕಳೆಯನ್ನು ಹೆಚ್ಚಿಸಿದ್ದಾರೆ. ಆ ಬಗ್ಗೆ ನಾನು "ಆನಂದ"ರಿಗೆ ತುಂಬಾ ಆಭಾರಿಯಾಗಿದ್ದೇನೆ.

ಇನ್ನು ಕೊನೆಯದೊಂದು ಮಾತು–ನನ್ನ "ಕಾನ್ವೆಂಟ್ ಗರ್ಲ್" ಪ್ರಕಟವಾದ ಕೂಡಲೆ ಬಂದ ಅಭಿನಂದನಾಪತ್ರಗಳು ಹಲವು. ಅವುಗಳಲ್ಲಿ ಆಸ್ಪತ್ರೆಯೊಂದರಿಂದ ಬಂದುದೊಂದು ಇತ್ತು. ಅದರಲ್ಲಿ ಹೀಗಿತ್ತು—

"ಪ್ರಿಯರೆ,

ನಾನು ಅಪೆಂಡಿಸ್ಯಾಟಿಸ್ ಆಪರೇಶನ್ನಿಗಾಗಿ ಈ ಆಸ್ಪತ್ರೆಗೆ ಬಂದವನು. ಆಪರೇಶನ್ ಆದನಂತರ ಹಲವು ದಿನಗಳನ್ನು ಈ ಆಸ್ಪತ್ರೆಯಲ್ಲೇ ಕಳೆಯ ಬೇಕಾಯ್ತು. ಆ ಸಮಯದಲ್ಲಿ ತಮ್ಮ "ಕಾನ್ವೆಂಟ್ ಗರ್ಲ್" ನನ್ನ ಕೈಗೆ ಸಿಕ್ಕಿತು. ಆಸ್ಪತ್ರೆಯಲ್ಲಿನ ನನ್ನ ಬೇಸರದ ದಿನಗಳನ್ನು ಅದರೊಂದಿಗೆ ಸುಖವಾಗಿ ಕಳೆದಿದ್ದೇನೆ. ತಮ್ಮ "ಕಾನ್ವೆಂಟ್ ಗರ್ಲ್"ಗೆ ತುಂಬಾ ಅಭಿನಂದನೆಗಳು.

ಇಂತು ತಮ್ಮವ... ..."

ಅಭಿನಂದನಾಪತ್ರದ ದೃಷ್ಟಿಯಲ್ಲೇನೋ ಇದು ಬಹಳ ಚೆನ್ನಾಗಿದೆ. ನನ್ನ ಪುಸ್ತಕದಿಂದಾಗಿ ಒಬ್ಬ ರೋಗಿಯ ಕೆಲವು ಕ್ಷಣಗಳಾದರೂ ಸುಖವಾಗಿ ಕಳೆದು ವೆಂಬುದನ್ನು ತಿಳಿದು, ತುಂಬಾ ಆನಂದವಾಗಬೇಕು. ಆದರೆ... ಆಸ್ಪತ್ರೆಯ ರೋಗಿಗಳಿಗೆ ಮಾತ್ರ ಇದರ ಮೆಚ್ಚು ಮತ್ತು ಉಪಯೋಗ–ಎಂಬ ಭೀತಿ

ಮೂಡುತ್ತಿದೆ. ಅಥವಾ ನನ್ನ ಕತೆಗಳನ್ನು ಮೆಚ್ಚಬೇಕಾದರೆ ಆಸ್ಪತ್ರೆಯ ರೋಗಿಗಳೇ ಸಮರ್ಥರು – ಎಂದಾದರೆ ?....ಹೇಗೂ ಇರಲಿ. ಈ "ಸೀತಾ–ರತ್ನ"ವನ್ನು ಹೊರಗೆಡವಿದ್ದೇನೆ. ಇನ್ನು....

ಮುಂದಿನ ಭಾರ ನಿಮ್ಮದು – ಓದುಗರದ್ದು ! ನಮಸ್ತೆ !

"ಘಾಟಿ – ನಗರ"
ಮಂಗಳೂರು – ೩.

ಇಂತು ತಮ್ಮವನೇ
ರಮಾನಂದ

## ಆಭಾರಮನ್ನಣೆ

| | |
|---|---|
| ನಾಮಕರಣ | ನವಭಾರತ |
| ತವರುಮನೆ ಬೇಕೇ ? | ರಾಷ್ಟ್ರಬಂಧು |
| ಕಾಣೆಯಾದ ಕೈಬಳೆಗಳು | ಉಷಾ |
| ಸೀತಾ – ರತ್ನ | ನವಭಾರತ |
| ಸೀತೆಯ ರಾಶಿ ಭವಿಷ್ಯ | ಉಷಾ |
| "ಗ್ಲೂಕೋಸ್" | ಬಡವರ ಬಂಧು |
| ಪ್ರಥಮ ಬಹುಮಾನ | ಸಾಹಿತ್ಯ ಪ್ರಗತಿ |
| ಮನೆಯೊಳಗಿನ ಮಹಾಯುದ್ಧ | ಅರುಣ |
| ಸೀತೆಯ ಹೊಟ್ಟೆನೋವು | ಉಷಾ |
| ಗೌರೀಪೂಜೆ | ಉಷಾ |

ಕಾಲವನ್ನು ಅನುಸರಿಸಿ, ಕತೆಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಿದ್ದೇನೆ. ಸಂಬಂಧಪಟ್ಟ ಪತ್ರಿಕಾ ಸಂಪಾದಕರಿಗೆ ಚಿರಋಣಿಯಾಗಿದ್ದೇನೆ.

—ಲೇಖಕ.

## ಅರ್ಪಣೆ

"ಕಾನ್ವೆಂಟ್ ಗರ್ಲ"ನ್ನು

ಓದಿ,

ಮೆಚ್ಚಿ,

ನಕ್ಕು,

ನನ್ನ ಬೆನ್ನು ತಟ್ಟಿದವರಿಗೆ

## ಈ ಸಂಕಲನದಲ್ಲಿ....

# ಸೀತಾ - ರತ್ನ

ತಾ|| ೮—೭—೫೦

ಹೃದಯೇಶ್ವರೀ,

ನಿನ್ನೆಯ ಸಾಯಂಕಾಲ ಬಾವುಟ ಗುಡ್ಡೆಯಲ್ಲಿನ ಮಕ್ಕಳಾಟದ ಬಯಲಿನಲ್ಲಿ ನಿನ್ನನ್ನು ಕಂಡೆ!

ಮಳಲಲ್ಲಿ ಆಡುತಿದ್ದ ಮಕ್ಕಳ ಆರ್ಭಟಿಗಳು ನನ್ನ ಕಿವಿಗಳಿಗೆ ಕೇಳಿಸದಾದವು! ಸುತ್ತುಮುತ್ತಲಿನ ಸೃಷ್ಟಿ ಸೌಂದರ್ಯವು ನನ್ನ ಕಣ್ಣುಗಳ ಮಟ್ಟಿಗೆ ಶೂನ್ಯವಾಯಿತು. ಸಮಯವು ಸ್ತಬ್ಧವಾಯಿತು! ಜಗತ್ತು ತಟಸ್ಥವಾಯಿತು! ಸೈಕಲ ಮೇಲೆ ಸವಾರಿ ಮಾಡುತಿದ್ದೆ ನಾನು – ಹಠಾತ್ ಕಾಲುಗಳು ಸತ್ಯಾಗ್ರಹವನ್ನು ಹೂಡಿ, ಸೈಕಲು ಅಡ್ಡ ಬೀಳಲು, ಕಾಲುಗಳನ್ನು ನೆಲಕ್ಕೆ ಊರಿ, ಸ್ತಂಭದಂತೆ ನಿಂತುಬಿಟ್ಟೆ!

ನನ್ನ ಚಿತ್ತವು ನಿನ್ನ ದಾಸಾನುದಾಸವಾಗಿದೆ. ನನ್ನ ಚಕ್ಷುಗಳು ನಿನ್ನನು ಕಾಣುವುದಕ್ಕಾಗಿ ಬಹುವಾಗಿ ಆತುರವಾಗಿವೆ. ನನ್ನ ಕಿವಿಗಳು ನಿನ್ನ ಸುಮಧುರ ಸ್ವರವನ್ನು ಕೇಳುವುದಕ್ಕಾಗಿ ಕಾತರವಾಗಿವೆ. ನನ್ನ ಕೈಗಳು ನಿನ್ನ ಮೃದುವಾದ ಕೇಶಪಾಶವನ್ನು ಸವರುವುದಕ್ಕಾಗಿ, ತವಕಿಸುತ್ತಿವೆ. ನನ್ನ ಮೂಗು ನಿನ್ನ ಶಿರಸ್ಸಿನಲ್ಲಿ ಮುಡಿದಿದ್ದ ಗುಲಾಬಿ ಹೂವನ್ನು ಆಘ್ರಾಣಿಸಲು ಉತ್ಸಾಹಿಯಾಗಿದೆ.

ಹೆಚ್ಚೇಕೆ ? ನಿನ್ನನ್ನು ಕಂಡಾಗಿನಿಂದ ನನ್ನ ಎಲ್ಲಾ ಇಂದ್ರಿಯಗಳ ವ್ಯಾಪಾರವು ಸ್ತಬ್ಧವಾಗಿದೆ !

ನನ್ನ ಮನಮೋಹಿನೀ,

ಮದ್ಭಾಗ್ಯರೂಪಿಣೀ,

ಮಮ ಹೃದಯ ಸ್ವಾಮಿನೀ,

ನಿನಗಾಗಿ ವಿರಕ್ತನಾಗಿದ್ದೇನೆ ನಾನು ! ನಿನ್ನನ್ನು ಪುನಃ ಕಾಣದೆ ವ್ಯಾಕುಲ ವಾಗಿದೆ ನನ್ನ ಮನ ! ಅನ್ನ ರುಚಿಸುವುದಿಲ್ಲ. ತಿಂಡಿ - ತೀರ್ಥಗಳ ಆಸೆಯಿಲ್ಲ ! ಬಟ್ಟೆ - ಬರೆಗಳ ಮೆಚ್ಚಿಲ್ಲ ! ನೀ ನಿಲ್ಲದಿದ್ದಲ್ಲಿ ಯಾವುದೂ ಬೇಡವೆಂದೇ ತೋರುತ್ತಿದೆ ಜಗತ್ತೇ ಶೂನ್ಯವಾಗಿದೆ ಬೆಳಕೂ ಕತ್ತಲೆಯೂ ಒಂದೇ ಆಗಿದೆ ! ಅಂಧಕಾರವು ನನ್ನ ಜೀವನವನ್ನು ಹೊದ್ದಿದೆ !

ನಿನಗಾಗಿ ಅಟ್ಲಾಂಟಿಕ್ ಸಾಗರವನ್ನು ಈಜುತಿದ್ದೆ. ಆದರೆ ಈಜು ಬರುವುದಿಲ್ಲ ! ನಿನಗಾಗಿ ಆಗಸವನ್ನೇ ಏರುತಿದ್ದೆ - ಆದರೆ ಮರ ಕೂಡಾ ಏರಲು ಬರುವುದಿಲ್ಲ ! ನಿನಗಾಗಿ ಹುಲಿಯೊಡನೆ ಸೆಣಸಾಡಿ, ಹುಲಿಯ ಹಾಲು ತರುತಿದ್ದೆ - ಆದರೆ ದಸರಾದಲ್ಲಿನ ಬಣ್ಣದ ಹುಲಿಗಳಲ್ಲದೆ, ಉಳಿದ ಹುಲಿಗಳನ್ನು ಕಂಡಿಲ್ಲ ! ನಿನಗಾಗಿ ನಾಳೆ ಬರಲಿರುವ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಿ, ಇತರರಿಗಿಂತ ಹೆಚ್ಚು ಕೂಗಾಡುತಿದ್ದೆ - ಆದರೆ ಗೆಲ್ಲುವ ಸಂಭವವಿಲ್ಲ ! ನಿನ್ನೆ ನಿನಗಾಗಿ ಹಂಪನಕಟ್ಟೆಯಿಂದ ಮಳೆಯಿಂದ ಒದ್ದೆಯಾಗಿಕೊಂಡು ಬಂದೆ - ಕೈಯಲ್ಲಿ ಕೊಡೆ ಇರಲಿಲ್ಲ ! ನಿನ್ನೆ ಸಾಯಂಕಾಲದಿಂದ ಇಂದು ಮಧ್ಯಾಹ್ನದ ತನಕ ಒಂದೇ ಒಂದು ಸಿಂಗಲ್ ಚಾ ನಿನಗಾಗಿ ಕುಡಿಯಲಿಲ್ಲ - ಹೋಟೆಲಿನವ ಸಾಲ ಕೊಡಲು ಕೇಳಲಿಲ್ಲ ! ನಿನಗಾಗಿ ಈ ದಿನ ಬೆಳಿಗ್ಗೆ ಭೋರ್ಗರೆವ ಮಳೆ ಯಲ್ಲೂ ಆ ಭಯಂಕರ ಚಳಿಯಲ್ಲೂ ತಣ್ಣೀರು ಸ್ನಾನ ಮಾಡಿದೆ - ಬಿಸಿನೀರು ಕಾಯಿಸಲು ಬೇಕಾದ ಸೌದೆ ತರಲು ಕೈಯಲ್ಲಿ ಕಾಸಿರಲಿಲ್ಲ ಇನ್ನೇನು ತಾನೇ ಮಾಡಲಿ - ನಿನಗಾಗಿ ? ಸಲ್ಫ್ಯೂರಿಕ್ ಆಸಿಡ್ ಕುಡಿದು ಪ್ರಾಣ ಬಿಡಲೇ ? ಕುತ್ತಿಗೆಗೆ ನೇಣು ಹಾಕಿಕೊಂಡು, ಜೀವ ಬಿಡಲೇ ? ಛೇ ಬೇಡ, ಈ ನನ್ನ ಪ್ರಾಣವನ್ನು ನಿನಗೆ ಮುಡುಪಾಗಿಟ್ಟಿದ್ದೇನೆ ! ನನ್ನ ತನು - ಮನ - ಧನಗಳೆಲ್ಲಾ - ಇದೋ - ನಿನಗೆ ಕೃಷ್ಣಾರ್ಪಣ !!!

ಪುನಃ ಭೇಟಿಯೆಂದು ?
ಇಂತೂ ಹಗಲಿರುಳು ನಿನ್ನ ಧ್ಯಾನವನ್ನೇ ಮಾಡುವ,

× × × ×

ಎಂತಹ ಚೆಲುವಾದ ಪ್ರಣಯ ಪತ್ರ !

ನಾನು ಬರೆದಿದ್ದೇನೆಂದು ನಾನೇ ಹೊಗಳಿಕೊಳ್ಳುವುದಲ್ಲ ಆದರೂ ನೀವೇ ಹೇಳಿರಿ – ಎಷ್ಟು ಚೆಲುವಾಗಿದೆ !

ನನ್ನ ಪರಿಚಯವಿರುವವರಿಗೆಲ್ಲಾ ಆಶ್ಚರ್ಯವಾಗಬೇಕಾದ ಪ್ರಸಂಗ! ಇದೆಲ್ಲಾದರೂ ನನ್ನ ಹೆಸರಿನಿಂದ "ನವಭಾರತ"ದಲ್ಲಿ ಪ್ರಸಿದ್ಧವಾದರೆ, ಅದರ ಪ್ರತಿಯೂ ನನ್ನ ಮಾವನವರ ಕೈಗೆ ಬಿದ್ದರೆ, (ಬೀಳುವ ಸಂದರ್ಭ ಬಹುಶಃ ಇಲ್ಲ !) ಅವರು ದೊಣ್ಣೆಯೆತ್ತಿಕೊಂಡು, ಧಾವಿಸಿ ಬಂದು, ನನ್ನ ಮಂಡೆಯನ್ನು ಪುಡಿಗಟ್ಟಲೆಳೆಸುವ ಪ್ರಸಂಗ ! ಮನೆಯಲ್ಲಿ ಸೀತಾ ಇರುವಾಗ್ಯೆ, ಸುಖಸಂಸಾರ ಮಾಡಿಕೊಂಡಿರುವಾಗ್ಯೆ ಈ ಪಿಶಾಚಿಗೆ ಈ ಬುದ್ಧಿ ಎಲ್ಲಿಂದ ಬಂತು ? - ಎಂದು ಯಾರಾದರೂ ಮೂಗಿನ ಮೇಲೆ ಬೆರಳು ಇಟ್ಟುಕೊಳ್ಳಲೇ ಬೇಕು ! "ಇವನಿಗೇಕೆ ಈ ಹುಚ್ಚು ಹಿಡಿಯಿತು ? ಹಾಳಾಗಿ ಹೋಗುತ್ತಾನೆ" - ಎಂದು ಹಲವರು ಭವಿಷ್ಯ ಸೂಚಿಸಲೂ ಬಹುದು ಆದರೆ

ಹಾಗಾದರೆ ನಾನೇಕೆ ಈ ಪ್ರಣಯ ಪತ್ರ ಬರೆದೆ ?

ಆಗಾಗ್ಯೆ ಕೊಂಕು ನುಡಿಯನ್ನಾಡುವ ಅಭ್ಯಾಸವಿದ್ದರೂ ಸುಮಧುರ ಭಾಷಿಣಿಯಾಗಿರುವ ಸೀತಾ - ಮಾತು ಮಾತಿಗೆ ತವರು ಮನೆಗೆ ಹೊರಟೆನೆಂದು ಗದರಿಸಿದರೂ, ಕ್ಷಣಕಾಲ ನನ್ನನ್ನಗಲದೆ ಇರುವ - ಸೀತಾ - "ದುಗ್ಗಿಯ ಗಂಡ ರೇಡಿಯೋ ಇಟ್ಟಿದ್ದಾನೆ, ನಾಗಿಯ ಗಂಡ ಎಮ್ಮೆ ತಕ್ಕೊಂಡಿದ್ದಾನೆ, ರಾಧುವಿನ ಗಂಡ ಅವಳಿಗೊಂದು ನೆಕ್‌ಲೇಸ್ ಮಾಡಿಸಿದ್ದಾನೆ - " ಎಂದೆಲ್ಲಾ ವರದಿಕೊಟ್ಟು ನನ್ನನ್ನು ಆ ಎಲ್ಲಾ ಗಂಡಂದಿರಿಗಿಂತಲೂ "ದಂಡ" ನನ್ನಾಗಿ ಮಾರ್ಪಡಿಸುವ ಸೀತಾ - ಜತೆಯಾಗಿ ಮಾರ್ಗದಲ್ಲಿ ಹೋಗುತ್ತಿರುವಾಗ್ಯೆ, ಎಲ್ಲಾದರೂ ಕಣ್ಣು ಹೊರಳಿಸಿ, ಮಾರ್ಗ ಸಾರುವವರತ್ತ ದೃಷ್ಟಿ ಬೀರಿದರೆ, "ಏನ್ರೀ, ಯಾರ್ರೀ ಅದು ?" ಎಂತ ಗದರಿಸುವ ಸೀತಾ - ಇವಳು ಮನೆಯಲ್ಲಿರುವಾಗ್ಯೆ ನಾನೇಕೆ ಈ ಪ್ರಣಯ ಪತ್ರ ಬರೆದೆ ?

ನೋಡೋಣ: ಯಾವುದಾದರೂ "ಕಾಮನ್‌ಸನ್ಸ್ ಕ್ರಾಸ್ ವರ್ಡ್"ಗೆ ಹಲವು ರೂಪಾಯಿಗಳನ್ನು ಹಾಕಿ, ನಾವು ಪಡಕೊಂಡ ಧೀರೋದಾತ್ತರು ಇದ್ದರೆ, ಈ ಒಗಟನ್ನು ಬಿಚ್ಚಲಿ! ಸಾಧ್ಯವಿಲ್ಲವೇ?

ನಾನೇ ಹೇಳುತ್ತೇನೆ

× × × ×

ಅದೊಂದು ದಿನ ಸಾಯಂಕಾಲ ಆಫೀಸನ್ನು ಮುಚ್ಚಿ, ಬಾಗಿಲಿಗೆ ಬೀಗ ಹಾಕಿ, ಮಾರ್ಗಕ್ಕೆ ಇಳಿಯುವಾಗ್ಯೆ, ಹಠಾತ್ ಒಂದು ಕಾರು ನನ್ನೆದುರು ನಿಂತಿತು. ಯಾರೋ ಏನೋ ಎಂದೆಣಿಸಿ ಮುಂದುವರಿಯುವಷ್ಟರಲ್ಲಿ ...

"ಏ ಮಿಸ್ಟರ್...." ಎಂದು ಕರೆದುದು ಕೇಳಿಸಿತು.

ಅದೊಂದು ಇಂಗ್ಲಿಷ್ ಭಾಷೆಯ ಮಜಾ ನೋಡಿ. ಎಲ್ಲಾದರೂ "ಏ ರಾಮಾ, ಏ ದೂಮಾ" ಅಂತ ಕರೆದರೆ ರಾಮು-ದೂಮುರಿಗೆ ಸಿಟ್ಟು ಬರುವುದೇ ಖಂಡಿತ. "ನಾವೇನು ಇವರ ಕೆಲಸದವರೇ?" ಎಂದು ಅವರು ಸಿಡಿಮಿಡಿ ಗುಟ್ಟುತ್ತಾರೆ. ಅದೇ-"ಮಿಸ್ಟರ್ ಬ್ಲಡೀ ಚೆಪ್-ಮಿಸ್ಟರ್ ಹೊಪ್ ಲೆಸ್ ಫೆಲ್ಲೋ" ಎಂದರೆ, ಅವರೇ ನಗಾಡುತ್ತಾ "ಗುಡ್ ಮಾರ್ನಿಂಗ್ ಸಾರ್" ಅನ್ನುತ್ತಾರೆ.. ಅಂತೆಯೇ ನಾನು ಕೂಡಾ, "ಏ ರಾಮು!" ಅಂತಿದ್ದರೆ, ಕಿವಿ ಕೊಡವಿಕೊಂಡು, ನೆಟ್ಟಗೆ ಹೋಗುತ್ತಿದ್ದೆ ಆದರೆ "ಮಿಸ್ಟರ್" ಎಂಬ ಒಂದು ಶಬ್ದವನ್ನು ಸೇರಿಸಿದ್ದರಿಂದ, ಅತ್ತ ಹೊರಳಿ ನೋಡುವಾಗ್ಯೆ

ಕಾರಿನಲ್ಲಿ ಒಂದು ಹೆಂಗಸು ಕೂತಿದೆ, ನನ್ನನ್ನೇ ಸನ್ನೆಯಿಂದ ಕರೆಯುತ್ತಿದೆ.

ಕಾರು! ಹೆಂಗಸು!! ಸನ್ನೆಯಿಂದ ಕರೆಯುವುದು!!! ತನ್ನನ್ನು!!!! ಅಂದ ಕೂಡಲೇ ಯಾರಿಗಾದರೂ ಒಮ್ಮೆಲೇ ಬ್ಲಡ್ ಪ್ರೆಶ್ಶರ್ ಜಾಸ್ತಿಯಾಗುವ ಸಂಭವ! ನನಗೆ ಹಾಗೇನೂ ಆಗಲಿಲ್ಲವೆನ್ನಿ! ಆದರೂ ಕಾರಿನ ಬಳಿ ಸಾರಿದೆ.

"ತಾವೇನೋ ಕಂಪೌಂಡರ್ ರಾಮುರಾಯರು?" ಅಂದಿತು ಹೆಂಗಸು.

"ಯಸ್ ಮೇಡಮ್" ಅಂದೆ ಕಾರಿನಲ್ಲಿ ಕೂತವರೊಡನೆ ಗೊತ್ತಿದ್ದ ಇಂಗ್ಲಿಷು ಖರ್ಚಾಗುವತನಕವಾದರೂ ಇಂಗ್ಲಿಷೇ ಮಾತನಾಡಬೇಕೆಂಬ ನಿಯಮ ನನ್ನದು.

"ಹಾಗಾದರೆ ಬನ್ನಿ.. ತಮ್ಮೊಡನೆ ಅಗತ್ಯದ ಕೆಲಸವಿದೆ."

ಮರುಮಾತನಾಡದೆ, ಕಾರನ್ನು ಹತ್ತಿ ಕುಳಿತೆ.

ಹೆಂಗುಸೆಂದಿತು. “ನನ್ನ ಹೆಸರು ರಾಧಾಬಾಯಿ. ನನ್ನ ಮನೆ ಘಳ್ನೀರಿನಲ್ಲಿ. ತಮ್ಮಿಂದ ನನಗೊಂದು ಕೆಲಸವಾಗಬೇಕಾಗಿದೆ.”

“ಏನದು ಕೆಲಸ ?” ಅಂದೆ

“ತಾವು ಬರೆಯುವುದರಲ್ಲಿ ನಿಷ್ಣಾತರೆಂದು ಕೇಳಿದ್ದೇನೆ !”

ಬರೆಯುವುದರಲ್ಲಿ ನಿಷ್ಣಾತ ? ನಾನು ?. .“ಹೂಂ” ಅಂದೆ. “ಆಫೀಸಿನ ಲೆಕ್ಕ ಪತ್ರ ಬರೆಯುವುದು ನಾನೇ. ಇನ್‌ಕಂಟ್ಯಾಕ್ಸ್ ಆಫೀಸಿಗೆ ಲೆಕ್ಕ ಕೊಂಡು ಹೋಗುವುದೂ ನಾನೇ. ಬಿಡುವಿರುವಾಗ್ಯೆ ಯಾರ್‍ಯಾರ ರೇಶನ್ ಅರ್ಜಿಗಳನ್ನು ಸಹ ಬರೆಯುತ್ತೇನೆ” ಅಂದೆ.

“ ಛೆ, ಹಾಗಲ್ಲ ತಾವು ವರ್ತಮಾನ ಪತ್ರಿಕೆಗಳಿಗೆ ಲೇಖನ, ಕತೆ, ಕವಿತೆ ಇತ್ಯಾದಿಗಳನ್ನು ಬರೆಯುತ್ತೀರಂತೆ.”

ಪುನಃ ಒಮ್ಮೆ ಆ ರಾಧಾಬಾಯಿಯನ್ನು ನಖಶಿಖಾಂತ ದೃಷ್ಟಿಸಿದೆ. ನನ್ನ ಕತೆ, ಕವಿತೆಗಳು ನನ್ನಂತಹ ಎಳೆ ಪ್ರಾಯದ ತರುಣರಿಗೆಲ್ಲಾದರೂ ರುಚಿಸಿಯಾವೇ ಹೊರತು, ಈ ರಾಧಾಬಾಯಿಯಂತಹ ಮುದುಕಿಗೆ ನನ್ನ ಕತೆಗಳ ರುಚಿಯೆಂತು ? ಹಾಳಾಗಲಿ ! “ಹೂಂ” ಅಂದೆ.

“ಅದಕ್ಕಾಗಿಯೇ ನಾನು ತಮ್ಮ ಬಳಿಗೆ ಬಂದೆ.”

“ಏನು ಪತ್ರಿಕೆ ಹೊರಡಿಸುತ್ತೀರಾ ? ನನ್ನದೊಂದು ಕತೆಯಾಗಬೇಕೆ ? ಕಳೆದ ದೀಪಾವಳಿಯಲ್ಲಿ ಬರೆದು, ಯಾರೂ ಪ್ರಕಟಮಾಡಲು ಒಪ್ಪದ್ದರಿಂದ, ಹಾಗೇ ಉಳಿದ ಕತೆಯೊಂದಿದೆ” ಅಂದೆ.

“ಛೆ....ಹಾಗಲ್ಲ !”

“ಮತ್ತೇನು ?”

ಕಿಂಚಿತ್ ತಡವರಿಸುತ್ತಾ ರಾಧಾಬಾಯಿ ಹೇಳಿದಳು....“ತಾವು ಕೆಲವು Love letters – ಪ್ರಣಯ ಪತ್ರಗಳನ್ನು ಬರೆದುಕೊಡಬೇಕು.”

ಆಶ್ಚರ್ಯದಿಂದ ಸ್ತಂಭೀಭೂತನಾದೆ. ಎಂತಹ ವಿಚಿತ್ರ ಮನುಷ್ಯರಿದ್ದಾರೆ ಈ ಜಗತ್ತಿನಲ್ಲಿ ? ನಾನು – ವಯಸ್ಸು ಮೂವತ್ತು ದಾಟದ ತರುಣ – ಮನೆಯಲ್ಲಿ ಹೆಂಡತಿ ಇದ್ದೂ ಈಕೆಗೆ....ಕಡಿಮೆಯೆಂದರೆ ಅರುವತ್ತು ದಾಟದ ಈ ಮುದುಕಿಗೆ ಪ್ರಣಯ ಪತ್ರ ?....ಗೊಳ್ಳೆಂದು ನಕ್ಕೆ.

ರಾಧಾಬಾಯಿಯೆಂದಳು : “ ನಗುವಂತಹ ಪ್ರಸಂಗವೇನೂ ಇಲ್ಲ ಅದರಲ್ಲಿ, ನನಗೊಬ್ಬಳು ಮಗಳಿದ್ದಾಳೆ ಸುನೀತಿ ಒಬ್ಬಳೇ ಮಗಳು ನನಗೆ ಅವಳು. ಬಹಳ ಮೆಚ್ಚಿನಿಂದ ಸಾಕಿದ ಹುಡುಗಿ, ಸದ್ಗುಣಿ ಆದರೆ ಮೊನ್ನೆ ದಸರೆಯ ರಜೆಯಲ್ಲಿ ನನಗೆ ಕಾರಣಾಂತರಗಳಿಂದ ಬೆಂಗಳೂರು ತನಕ ಹೋಗ ಬೇಕಾಯಿತು ಮನೆಯಲ್ಲಿ ಅಡಿಗೆ ಮಾಡುವ ಭಟ್ಟನೊಬ್ಬ, ಸುನೀತಿಯೊಬ್ಬಳು– ಹೀಗೆ ಇಬ್ಬರೆ! ನಾನು ವಾಸಸು ಮರಳುವುದರೊಳಗೆ ವಿಧಿಯು ಒಂದು ಆಟ ವನ್ನಾಡಿತು.”

“ ಏನದು ? ಅಡಿಗೆ ಭಟ್ಟನು ಸತ್ತು ಹೋದನೆ ?” ಎಂದೆ

“ ಇಲ್ಲ, ಹಾಗಿದ್ದರೆ ಚೆನ್ನಾಗುತಿತ್ತು. ಆದರೆ ಆ ಹಾಳಾದವ ತಿಂದು ಸೊಕ್ಕಿ, ಅನ್ನ ಕೊಟ್ಟ ಕೈಯನ್ನೇ ಕಚ್ಚಿದ್ದಾನೆ ”

ಉತ್ಸುಕತೆಯಿಂದ “ ಏನು ಮಾಡಿದ ?” ಎಂದೆ.

“ ನಾನು ಇಲ್ಲದಾಗಿದ್ದ ಎಂಟು ದಿನಗಳಲ್ಲೇ ಸುನೀತಿಯ ಮೇಲೆ ಮಾಯದ ಮಂತ್ರವನ್ನು ಬೀಸಿ, ತನ್ನ ಬಲೆಯಲ್ಲಿ ಹಾಕಿಕೊಂಡಿದ್ದಾನೆ ಸುನೀತಿಯು ಅವನನ್ನಲ್ಲದೆ ಬೇರಾರನ್ನೂ ಮದುವೆಯಾಗುವುದಿಲ್ಲವೆಂದು ಹಟ ತೊಟ್ಟಳು. ನಾವು ದೊಡ್ಡ ಮನೆತನದವರು, ಹಾಗೆಲ್ಲಾ ಅಡಿಗೆ ಭಟ್ಟನನ್ನು ಮದುವೆಯಾಗುವುದೇ ? – ಎಂದು ಗದರಿಸಿದರೆ, ಅಡಿಗೆ ಭಟ್ಟನೂ ಮನುಷ್ಯನೇ – ದೊಡ್ಡ ಮನೆತನದವರೂ ಮನುಷ್ಯರೇ ಎಂದು ತತ್ವವನ್ನು ಹಾಡತೊಡಗಿದಳು.”

ಭಳಿರೇ ! ಎಂತಹ ಹುಡುಗಿ ! ಏನು ತತ್ವ ವಿಚಾರ !! ಕಮ್ಯುನಿಸ್ಟರನ್ನು ಚಿಲ್ಲರೆಗಾದರೂ ಬಿಟ್ಟುಕೊಡುವವಳಲ್ಲ !

“ ಮುಂದೇನಾಯಿತು ?” ಎಂದು ಆತುರದಿಂದ ರಾಧಾಬಾಯಿಯನ್ನು ಪ್ರಶ್ನಿಸಿದೆ.

“ ಮತ್ತೇನಾಗುವುದು ? ಗತ್ಯಂತರವನ್ನು ಕಾಣದೆ, ಅವನನ್ನು ಅಡಿಗೆಯ ಕೆಲಸದಿಂದ ನಿವೃತ್ತಗೊಳಿಸಿದೆ.”

“ ಮುಂದೆ ?”

“ ಈಗ ಸುನೀತಿ ಹಟ ಹಿಡಿದಿದ್ದಾಳೆ – ಆ ಅಡಿಗೆ ಭಟ್ಟನನ್ನು ಕಾಣದೆ ಊಟ ಮಾಡುವುದಿಲ್ಲ – ನೀರು ಕುಡಿಯುವುದಿಲ್ಲ – ಪಾಠ ಓದುವುದಿಲ್ಲ – ಇಡೀ ದಿನ ಅಳುತ್ತಾ ಕೂತಿರುತ್ತಾಳೆ. ಗಳಿಗೆಗೊಮ್ಮೆ ಬಾವಿಗೆ ಬಿದ್ದು ಪ್ರಾಣ

ತೆರುತ್ತೇನೆ – ಎಂದು ಒದರಾಡುತ್ತಾಳೆ. ಅಷ್ಟು ಮಂಕುಬೂದಿ ಎರಚಿದ್ದಾನೆ ಆ ಗೋಮುಖ ವ್ಯಾಘ್ರ – ಅಡಿಗೆ ಭಟ್ಟ !"

ಎಂತಹ ರೊಮಾಂಟಿಕ್ ನಾವೆಲ್ಲು ! ಯಾವ ಅದ್ಭುತ ಕತೆಗಾರನ ತಲೆಯಲ್ಲೂ ಇಂತಹ ಭಯಂಕರ " ಪ್ಲಾಟ್ " ಹೊಳೆದಿರಲಿಕ್ಕಿಲ್ಲ! " ನನ್ನಿಂದೇನಾಗಬೇಕು ?" ಎಂದು ಪ್ರಶ್ನಿಸಿದೆ

" ತಾವು ಆಕೆಯ ತಲೆಯೊಳಗೆ ಹೊಕ್ಕಿರುವ ಆ ಅಡಿಗೆ ಭಟ್ಟನ ಮಂಕನ್ನು ಕಿತ್ತೆಸೆಯಬೇಕು "

" ನಾನೇನು ಮಂತ್ರವಾದಿಯೇ ?"

" ಮಂತ್ರವಾದಿಯೇ ಅಗತ್ಯವಿಲ್ಲ, ನಿಮ್ಮ ಲೇಖನಿಯ ತಂತ್ರವಾದವೇ ಸಾಕು ಅವಳಿಗೆ ಆ ಅಡಿಗೆ ಭಟ್ಟನೊಂದಿಗೆ ಪ್ರಥಮ ಸಲದ ಪ್ರಣಯಾನುಭವ. ಆದ್ದರಿಂದ ಅವಳ ತಲೆಯೊಳಗೆ ಇನ್ನೊಂದು ಪ್ರಣಯ ಬೀಜವನ್ನು ಬಿತ್ತಿದಲ್ಲಿ, ಆ ಭಟ್ಟನ ನೆನಪು ತನಗೆ ತಾನಾಗಿ ಮಾಸುತ್ತದೆ "

ಒಳ್ಳೆಯ ವ್ಯಾಪಾರ ! ಅವಳನ್ನು ಉದ್ಧಾರ ಮಾಡಲಿಕ್ಕೆಂದು, ನಾನು ಅವಳಿಗೆ ಪ್ರಣಯ ಪತ್ರಗಳನ್ನು ಬರೆದು, ಕೊನೆಗೆ ಅವಳು ನನ್ನ ಬೆನ್ನು ಹತ್ತಿದರೋ ?

ನಾನು ಮನದಲ್ಲಿ ಮಾಡಿದ ಯೋಚನೆ ಮುಖದಲ್ಲಿ ಒಡೆದು ತೋರಿತೆಂದು ತೋರುತ್ತದೆ ರಾಧಾಬಾಯಿಯೆಂದಳು – " ಹಾಗೇನೂ ಅನುಮಾನಪಡುವ ಕಾರಣವಿಲ್ಲ. ತಾವಾರೆಂದು ನಾನು ಅವಳಿಗೆ ತಿಳಿಸುವುದಿಲ್ಲ ಅವಳ ಮನಸ್ಸು ಅಡಿಗೆ ಭಟ್ಟನಿಂದ ದೂರವಾದರೆ ಸಾಕು."

ಮತ್ತೂ ಸಂದೇಹದಲ್ಲಿ ಬಿದ್ದೆ

" ತಮ್ಮ ಅದ್ಭುತವಾದ ಲೇಖನಿಯಿಂದ ಒಂದೆರಡು ಪ್ರಣಯ ಪತ್ರಗಳನ್ನು ಬರೆದರೆ ಸಾಕು. ಅವಳ ಮಂಕು ಮಾಯವಾಗುತ್ತದೆ. ತಾವು ಬರೆದ ಅನೇಕ ರೋಮಾಂಟಿಕ್ ಕತೆಗಳನ್ನು ಓದಿದ್ದೇನೆ. ಓದುವಾಗ್ಯೆ ಆ ರೀತಿಯ ಅನುಭವ ನನ್ನ ಹಣೆಯಲ್ಲೇಕೆ ವಿಧಿ ಬರೆದಿಲ್ಲ – ಎಂದು ಪರಿತಪಿಸುತ್ತೇನೆ. ಪ್ರಣಯಗಳನ್ನು ಅಷ್ಟು ಸೊಗಸಾಗಿ ಬರೆಯುತ್ತೀರಿ ನೀವು ನಿಮ್ಮಿಂದಲ್ಲದೆ ಇತರರಿಂದ ಈ ಕಾರ್ಯ ಸಾಧ್ಯವಾಗದು."

ಅಲ್ಲ, ಹೊಗಳಿಕೆ ಕೇಳಿದ ಕೂಡಲೇ ಬಲಿಬೀಳುವ ಆಸಾಮಿಯಲ್ಲ ನಾನು. ಆದರೂ ಅಷ್ಟೊಂದು ಅವಳು ಹೇಳುವಾಗ್ಯೆ ..

"ಅಲ್ಲದೆ ಸುಮ್ಮಸುಮ್ಮನೆ ತಮಗೆ ಪತ್ರ ಬರೆಯಲು ಹೇಳುವುದಿಲ್ಲ ನಾನು. ಪ್ರತಿ ಪ್ರಣಯ ಪತ್ರ ಒಂದರ ರೂಪಾಯಿ ಹತ್ತು ಸಂಭಾವನೆಯನ್ನು ಕೊಡುತ್ತೇನೆ ."

ಇಷ್ಟು ಹೇಳಿದನಂತರವೂ ಪ್ರಲೋಭಕ್ಕೆ ಒಳಗಾಗದವನು ಮನುಷ್ಯನೇ!

ಪತ್ರಕ್ಕೆ ಹತ್ತು ರೂಪಾಯಿ! ತಿಂಗಳಿಗೆ ನಾಲ್ಕು ಪತ್ರಗಳನ್ನಾದರೂ ಬರೆಯುತ್ತೇನೆ. ನಾಲ್ವತ್ತು ರೂಪಾಯಿ!! ಸೀತೆಗೊಂದು ಚಂದ್ರಲೇಖಾ ಸೀರೆ!. .ಸಮ್ಮತಿಸೂಚಕವಾಗಿ ತಲೆಯನ್ನಲುಗಿಸಿದೆ.

"ಪ್ರಥಮ ಪತ್ರಕ್ಕಾಗಿ ನಾಳೆ ಡ್ರೈವರನ್ನು ಹತ್ತು ರೂಪಾಯಿ ಕೊಟ್ಟು ಕಳುಹಿಸುತ್ತೇನೆ. ವಾರಕ್ಕೊಂದರಂತೆ ಪತ್ರ ಬರೆಯಿರಿ. ತಮಗೇನೂ ತೊಂದರೆ ಯಾಗದಂತೆ ನಾನಿದ್ದೇನೆ."

× × × ×

ಈಗ ತಿಳಿಯಿತೇ ನಾನೇಕೆ ಪ್ರಣಯ ಪತ್ರ ಬರೆಯಲಾರಂಭಿಸಿದೆನೆಂದು!

ನಾಲ್ಕನೇ ದಿನ ರಾಧಾಬಾಯಿಯಿಂದೊಂದು ಪತ್ರ ಬಂತು. "....ತಮ್ಮ ಪ್ರಥಮ ಪ್ರಣಯ ಪತ್ರವನ್ನು ನೋಡಿಯೇ ನನ್ನ ಮಗಳು ಅಡಿಗೆಯ ಭಟ್ಟನನ್ನು ಮರೆಯಲಾರಂಭಿಸಿದ್ದಾಳೆ. ನಾಲ್ಕು ದಿನಗಳಲ್ಲಿ ನಿನ್ನೆ ತಾನೇ ಊಟ ಮಾಡಿದಳು. 'ಎಷ್ಟು ಒಳ್ಳೆಯ ಜನರಿದ್ದಾರಮ್ಮ ಈ ಮಂಗಳೂರಲ್ಲಿ?' – ಎಂದು ಕೂಡಾ ಕೇಳಿದಳು. ಇನ್ನೊಂದು ಪತ್ರವನ್ನು ಆದಷ್ಟು ಶೀಘ್ರದಲ್ಲಿ ಬರೆಯಿರಿ...."

ನನ್ನ ಎರಡನೇ ಪತ್ರವನ್ನು – ಸುಮನೋಹರ ಸ್ವರೂಪಿಣಿ ಸುನೀತಿ – ಎಂದೇ ಆರಂಭಿಸಿದೆ. ಅವಳನ್ನು ನಾನು ಕಂಡಿಲ್ಲವಾದರೂ, ಅವಳ ಕಣ್ಣುಗಳನ್ನು ಚಿಗರಿಯ ಕಣ್ಣುಗಳಿಗೆ ಹೋಲಿಸಿದೆ ಮೂಗನ್ನು ತಾವರೆ ದಂಟಿಗೆ ಹೋಲಿಸಿದೆ. ಚೆಂದುಟಿಗಳನ್ನು ಕಾಮನಬಿಲ್ಲಿನೊಂದಿಗೆ ತುಲನೆ ಮಾಡಿದೆ. ಮಧುಬಾಲಾ – ಸುರೈಯ್ಯಾ ಇವರಿಗಿಂತಲೂ ನಿನ್ನ ರೂಪ ಹಿರಿದು – ಎಂದೆ. ಪತ್ರವನ್ನು "ನನ್ನ ನಿನ್ನ ಸಮಾಗಮವೆಂದಾಗುವುದೋ –" ಎಂಬ ಕಾತರತೆಯ ಭಾವನೆ ಯಿಂದ ಕೊನೆಗೊಳಿಸಿದೆ.

ಪುನಃ ಮೂರನೇ ದಿನ ಈ ಎರಡನೇ ಪತ್ರದ ಬಾಬ್ತು ರೂಪಾಯಿ ಹತ್ತು ವಸೂಲಾಯಿತು.

ಮೂರನೇ ಪತ್ರದಲ್ಲಿ ನನ್ನ ಮನದ ಉದ್ವೇಗವನ್ನು ವ್ಯಕ್ತಪಡಿಸಿದೆ. ಆಕೆಯೊಂದು ದೊರೆತರೆ ಸ್ವರ್ಗವನ್ನು ಎಡಗಾಲಿನಿಂದೊದೆವೆನೆಂದೆ. ಅವಳು ನಡೆಯುವಾಗ ಅವಳಾ ಮಂದಗಜಗತಿಗೆ ನನ್ನ ಹೃದಯವು ತಾಳ ಹಾಕುತ್ತದೆಂದು ಬರೆದೆ. ಅವಳಿಲ್ಲದಿದ್ದಲ್ಲಿ ಉತ್ತಮವಾದ ಕಾಫಿಗೂ ರುಚಿ ಇಲ್ಲವೆಂದೆ. ಅವಳಿದ್ದರೆ ಅಕ್ಕಚ್ಚು ನೀರನ್ನಾದರೂ ಅಮೃತವೆಂದೆಣಿಸಿ ಕುಡಿಯಬಲ್ಲೆನೆಂದೆ. ಕೊನೆಯಲ್ಲಿ– ನಾನು ನಿನ್ನನ್ನು ಖಂಡಿತವಾಗಿ ವಿವಾಹವಾಗುತ್ತೇನೆ. ಸಿದ್ಧಳಿರುವೆಯಾ ? – ಎಂಬ ಪ್ರಶ್ನೆಯನ್ನು ಸೂಚಿಸಿ, ಪತ್ರವನ್ನು ಸಮಾಪ್ತಗೊಳಿಸಿದೆ.

ನಾಲ್ಕನೆಯ ಪತ್ರದಲ್ಲಿ—

ಇಲ್ಲ , ನಾಲ್ಕನೆಯ ಪತ್ರವನ್ನೇ ಬರೆಯಲಿಲ್ಲ.

× × × ×

ಸಾಯಂಕಾಲ–ಆದಿತ್ಯವಾರವಾದುದರಿಂದ ಆಫೀಸಿಗೆ ರಜೆಯಾದುದರಿಂದ ಮನೆಯಲ್ಲೇ ಕೂತು, ನಾಲ್ಕನೆಯ ಪತ್ರವನ್ನು ಬರೆಯುವ ಸನ್ನಾಹಕ್ಕೆ ತೊಡಗಿದ್ದೆ. ಸೀತಾ ಅವಳ ಗೆಳತಿಯ ಮನೆಗೆ–ಎಲ್ಲೋ ಫಳನೀರಿನಲ್ಲಂತೆ–ಅಲ್ಲಿಗೆ ಹೋಗಿದ್ದಳು.

ಮನೆಯೆದುರಿಗೆ ಮಾರ್ಗದಲ್ಲೊಂದು ಕಾರು ಬಂದು ನಿಂತ ಸದ್ದು ಕೇಳಿಸಿತು ತಲೆಯೆತ್ತಿದರೆ

ಚಲೋದಾದ ಹೊಸ ಚೆವರ್ಲೆಟ್ ಕಾರು. ಅದರೊಳಗಿಂದ ಯಾರೊ ಒಂಗು ಹೆಂಗಸು ಕೆಳಗಿಳಿಯುತ್ತಿದೆ!

ಹೆಂಗಸೇನು ? ಸಾಧಾರಣ ೨೦ – ೨೨ ವಯಸ್ಸು ದಾಟದ ತರುಣಿ! ಇಳಿದವಳೇ ನೆಟ್ಟಗೆ ನನ್ನ ಮನೆಗೆ ಬಂದಳು. ಜಗುಲಿಯನ್ನು ಹತ್ತಿ “ ತಾವೇನೋ ರಾಮರಾಯರು ?” ಎಂದು ಪ್ರಶ್ನಿಸಿದಳು.

“ ಹೂಂ ” ಅಂದೆ.

ಕೂಡಲೇ ಧಾವಿಸಿ ಮುಂದೆ ಬಂದು, ನನ್ನನ್ನು ಗಟ್ಟಿಯಾಗಿ ಅಪ್ಪಿಹಿಡಿದು, “ ಹಲ್ಲೋ ಡಾರ್ಲಿಂಗ್, ನಿಮ್ಮ ದರ್ಶನ ಇಂದಾದರೂ ಆದುದಕ್ಕಾಗಿ ನಾನು

ಪರಮಾತ್ಮನ ಆಭಾರವನ್ನು ಮನ್ನಿಸುತ್ತೇನೆ. ಇದೇ ಏನು ತಮ್ಮ ಮನೆ? ಬಹಳ ಚೆನ್ನಾಗಿದೆ. ಆದರೆ ಒಬ್ಬರಿಗೆ ಬಹಳ ದೊಡ್ಡದಾಗಿದೆ ನಾನು ಕೂಡ ಇಲ್ಲಿಗೆ ಬಂದು ಉಳಕೊಂಡರೆ, ಮನೆಯು ತುಂಬಿದಂತಾಗುವುದಲ್ಲದೆ, ಏಕಾಂಗಿಯಾಗಿ ಕಳೆಯುತಿದ್ದ ನಿಮ್ಮ ಜೀವನವೂ ಸುಖಮಯವಾಗುವುದು ”

ಫಜೀತಿಯಾಯಿತಲ್ಲ! ದೊಡ್ಡ ಮನೆಯಲ್ಲಿ ಏಕಾಂಗಿಯಾಗಿ ವಾಸಿಸುವ ವರಿಗೊಂದು ಪಾಠವಿದು! ಅದರ ದೊಡ್ಡ ಮನೆಯನ್ನು ತುಂಬಿಸಲೂ ಅವರ ಏಕಾಂಗಿ ಜೀವನವನ್ನು ಹಸನಾಗಿರಿಸಲು ಇಂತಹ ಹುಚ್ಚು ಹುಡುಗಿಯರೂ ಇದ್ದಾರೆ ಜಗತ್ತಿನಲ್ಲಿ! ಜಾಗ್ರತೆ!! ಮೆಲ್ಲನೆ “ತಮ್ಮ ಪರಿಚಯ ವಾಗಲಿಲ್ಲವಲ್ಲ?” ಎಂದೆ.

ಆಕೆ ನನ್ನ ಬಲಗೈಯನ್ನು ಗಟ್ಟಿಯಾಗಿ ಹಿಡಿದುಕೊಂಡು ಗೊಳ್ಳೆಂದು ನಕ್ಕಳು. “ಏನು ಹಾಸ್ಯಮಾಡುತ್ತಿರುವಿರಿ? ಪತ್ರಿಕೆಯಲ್ಲಿ ತಮ್ಮ ಲೇಖನ ಗಳನ್ನೋದಿಯೇ ತಿಳಿದಿದ್ದೆ– ನೀವು ಬಹು ದೊಡ್ಡ ಹಾಸ್ಯಗಾರರೆಂಬುದನ್ನು. ಅದು ಇಂದು ಸ್ಪಷ್ಟವಾಯಿತು ಅಲ್ಲ, ನನ್ನ ಪರಿಚಯವಿಲ್ಲವೆನ್ನುತ್ತೀರಲ್ಲ! ನಾನೇ ತಮ್ಮ ಹೃದಯೇಶ್ವರಿ – ಭಾಗ್ಯರೂಪಿಣಿ – ಸುಮನೋಹರ ಸ್ವರೂಪಿಣಿ – ಸುನೀತಾ!”

ಸುನೀತಾ! ಸುನೀತಾ!! ಆಶ್ಚರ್ಯದಿಂದ ಅವಾಕ್ಕಾದೆ.

ಸುನೀತಾ ಮುಂದುವರಿಸಿದಳು· “ಎಷ್ಟು ಚೆನ್ನಾಗಿ ಪ್ರಣಯ ಪತ್ರ ಗಳನ್ನು ಬರೆಯುತ್ತೀರಿ ನೀವು! ನಿಮ್ಮ ಪತ್ರಗಳು ಬರಲಾರಂಭವಾದಂದಿನಿಂದ ನನ್ನ ಜೀನನದಲ್ಲೊಂದು ಬೆಳಕು ಬಿದ್ದಿದೆ ಅನುದಿನವೂ ತಮ್ಮ ಪತ್ರಗಳನ್ನು ತಲೆದಿಂಬಿನ ಅಡಿಯಲ್ಲೇ ಇಟ್ಟು, ನಾನು ನಿದ್ರೆ ಹೋಗುತ್ತೇನೆ. ಡಾರ್ಲಿಂಗ್ ಎಂದು ನಾವು ವಿವಾಹವಾಗೋಣ! ಶುಭಸ್ಯ ಶೀಘ್ರಂ – ಅಂತಾರಲ್ಲ. ಹಾಗೆಯೇ ಶೀಘ್ರದಲ್ಲೇ ಮದುವೆಯಾಗಿ ಸುಖ ಸಂಸಾರವನ್ನು ಹೂಡುವಾ .”

ಪರಮಾತ್ಮಾ, ಏನು ಪ್ರಸಂಗವನ್ನು ತಂದೊಡ್ಡಿದೆ?

ನಾನೆಂದೆ “ನಾನು ತಮಗೆ ಪತ್ರಗಳನ್ನು ಬರೆಯಲಿಲ್ಲಮ್ಮಾ!”

ಪುನಃ ಗೊಳ್ಳೆಂದು ನಕ್ಕಳು ಸುನೀತಾ. “ಏನು ಹಾಸ್ಯ ಮಾಡುತ್ತೀರಿ ನೀವು? ನೀವು ನಿಮ್ಮ ಹೆಸರನ್ನು ಪತ್ರಗಳ ಅಡಿಯಲ್ಲಿ ಸೂಚಿಸದೆ ಇದ್ದರೂ, ನಿಮ್ಮ ಹಸ್ತಾಕ್ಷರಗಳಿವೆಯಲ್ಲ! ನಿಮ್ಮ ಆಫೀಸಿನ ಗುಮಾಸ್ತರಿಗೆ ತೋರಿಸಿ, ಆ

ಪತ್ರಗಳು ನಿಮ್ಮವೆಂದೇ ಖಚಿತಮಾಡಿಕೊಂಡಿರುತ್ತೇನೆ. ಆಟದ ಮಾತು ಗಳನ್ನೆಲ್ಲಾ ಬಿಡಿ, ಎಂದು ನಾವು ಮದುವೆಯಾಗೋಣ ಎಂಬುದನ್ನು ತಿಳಿಸಿ."

ಭಗವಂತಾ, ಮನೆಯಲ್ಲಿ ಸೀತೆ ಇದ್ದಾಳೆ. ಇದೊಂದು ಅಪಶಕುನವನ್ನು ಮದುವೆಯಾಗುವುದೇ ? ಸೀತೆ ಇಲ್ಲದಿದ್ದರೂ ಕೂಡಾ ಈ ದುರ್ದುಂಡಿಯನ್ನು ಮದುವೆಯಾಗಲಾರೆ ಪರಮಾತ್ಮ, ಏಕೆ ಒಂದು ಸಿಡಿಲಾದರೂ ಬಡಿದು ಈಕೆ ಭಸ್ಮೀಭೂತವಾಗಲೊಲ್ಲಳು ?

ಕಾತರದಿಂದ - "ಅಮ್ಮಾ, ನಾನು ನಿಮ್ಮನ್ನು ಮದುವೆಯಾಗುವುದು ಈ ಜನ್ಮದಲ್ಲಿ, ಸಾಧ್ಯವಿಲ್ಲ !" ಅಂದೆ.

ತುಳಿದೆಬ್ಬಿಸಿದ ನಾಗಿಣಿಯಂತಾದಳು ಸುನೀತಾ. "ಏನ್ರೀ. ಬಹಳ ಉದ್ಧಟರಂತೆ ಮಾತನಾಡುತ್ತಿರುವಿರಿ? ನನಗೆ ಆ ರೀತಿ ಮೂರು - ನಾಲ್ಕು ಪ್ರೇಮಪತ್ರಗಳನ್ನು ಬರೆದು, ಕೊನೆಗೆ ವಿವಾಹವಾಗುವೆನೆಂದು ಒಪ್ಪಿ, ಈಗ ಕೈ ಬಿಡುವಿರಾ ? ಸಾಧ್ಯವಿಲ್ಲ, ಸ್ತ್ರೀ ಹೃದಯವೆಂದರೆ ಬೇಕಾದಾಗ ಕೈಗೆತ್ತಿ ಕೊಂಡು, ಬೇಡಾದಾಗ ಬಿಸುಟಲಾಗುವ ಕರವಸ್ತ್ರವೆಂದೆಣಿಸಿದಿರಾ ? ಪ್ರೇಮ ಪತ್ರಗಳನ್ನು ಬರೆದಿದ್ದೀರಿ. ವಿವಾಹವಾಗುವೆನೆಂದು ಪತ್ರಮುಖೇನ ವಚನ ಕೊಟ್ಟಿದ್ದೀರಿ ಇನ್ನು ತಮ್ಮನ್ನು ಬಿಡಲಾರೆ!'

ಕಂಗಾಲಾದೆ

"ಸಾಮೋಪಾಯದಿಂದ ನೀವು ಬಗ್ಗುವುದಿಲ್ಲವಾದರೆ, ನ್ಯಾಯಾಲಯವಿದೆ. ನಿಮ್ಮ ಮೇಲೆ, ಮಾತು ಮುರಿದ ಆರೋಪವನ್ನು ಹೊರಿಸಿ, ದಾವೆ ಹೂಡುತ್ತೇನೆ !"

ಪರಮಾತ್ಮಾ! "ಸಾಧ್ಯವಿಲ್ಲದ್ದನ್ನು ಮಾಡೆಂದರೆ, ಹೇಗೆ ಮಾಡಲಿ ತಾಯಿ ?" ಅಂದೆ, ಕರುಣಾವಾಣಿಯಿಂದ ಕಣ್ಣುಗಳಲ್ಲಿ ನೀರು ತುಂಬಿತು - ನನ್ನ ಜೀವನದ ಇತಿಶ್ರೀಯಾಯಿತೆಂದು.

ಸುನೀತಿಯೆಂದಳು. ". ಪತ್ರಗಳಲ್ಲಿನ ತಮ್ಮ ಪ್ರೇಮವನ್ನು ನಂಬಿದ್ದೆ. ನನ್ನ ಹೃದಯವನ್ನು ತಮಗೆ ಧಾರೆಯೆರೆದಿದ್ದೆ. ಆದರೆ ಈಗ ತಮ್ಮ ಮಾತು ಗಳನ್ನು ಕೇಳಿ, ನನ್ನ ಆಶೆಯು ಭಗ್ನವಾಗಿದೆ ಹೃದಯವು ನುಚ್ಚು ನೂರಾಗಿದೆ... ತಾವು ನನ್ನನ್ನು ವಿವಾಹವಾಗುವುದಿಲ್ಲವೆಂದೇ ತೀರ್ಮಾನಿಸಿದರೆ, ನಾನು ನನ್ನ

ಈ ಭಗ್ನ ಹೃದಯದೊಂದಿಗೆ ಬಾವಿಯಲ್ಲಿ ಬಿದ್ದು ಪ್ರಾಣ ಕಳಕೊಳ್ಳುತ್ತೇನೆ. ಅಥವಾ ”

ಸುನೀತಿಯು ಕ್ಷಣಕಾಲ ನನ್ನನ್ನು ದಿಟ್ಟಿಸಿದಳು. ನನ್ನ ನಾಲಗೆಯೇ ಮಗುಚಲಾರದಾಗಿತ್ತು.

ಸುನೀತಿಯೆಂದಳು “ಮಾತು ಮುರಿದ ಅಪರಾಧಕ್ಕಾಗಿ ಐದು ಸಾವಿರ ರೂಪಾಯಿಗಳನ್ನು ಕೊಡಿರಿ. ಆದರೆ ನಾನು ಈ ನನ್ನ ಹಾಳಾದ ಹೃದಯವನ್ನು ಹೊತ್ತುಕೊಂಡು, ಯಾವುದಾದರೂ ಬಹುದೂರದ ಅಜ್ಞಾತ ಊರಿಗೆ ಹೋಗಿ, ನಿಮ್ಮನ್ನು ಮರೆಯುವ ಪ್ರಯತ್ನ ಮಾಡುತ್ತೇನೆ.”

ಐದು ಸಾವಿರ ರೂಪಾಯಿಗಳು !!

ಹಠಾತ್ “ಐದು ಸಾವಿರ ರೂಪಾಯಿಗಳೇಕೆ ?” ಎಂಬ ಮಾತು ಕೇಳಿಸಿತು. ನೋಡಿದರೆ – ದ್ವಾರದಲ್ಲಿ ಸೀತಾ !

ತಳಮಳಗೊಂಡೆ. ನನ್ನ ಗುಟ್ಟು ರಟ್ಟಾಯಿತು. ಸತ್ಯ ಹೇಳಿದರೂ ನಂಬಲಾರಳು ಸೀತಾ ಅವಳ ಬಾಯಲ್ಲಿ ಇನ್ನು ನನ್ನ ಬದುಕಿಲ್ಲ ಪರಮಾತ್ಮಾ, ಒಮ್ಮೆ ನಿನ್ನ ಸಿಡಿಲನ್ನು ನನ್ನ ಮೇಲೆ ಎರಗಿಸು ! ಫಾಲಾಕ್ಷ ಶಿವನೇ, ನಿನ್ನ ಹಣೆಗಣ್ಣ ದೃಷ್ಟಿಯನ್ನು ನನ್ನ ಮೇಲೊಮ್ಮೆ ಬೀರು ! ಭೂಮಿ ತಾಯಿ, ಒಂದು ಭೂಕಂಪವನ್ನು ಉತ್ಪಾದಿಸಿ, ನನ್ನನ್ನು ನಿನ್ನ ಗರ್ಭದಲ್ಲಿ ಸೆಳೆದುಕೊ !

ಸುನೀತಿ ಕೇಳಿದಳು. “ಯಾರು ತಾವು ?”

ಸೀತೆಯೆಂದಳು “ನಾನು ಇವರ ತಂಗಿ – ಸೀತಾ – ನೀವಾರು ತಾಯಿ ?”

ಸೀತಾ – ನನ್ನ ತಂಗಿ ! ಏನಿದು ? ಜಗತ್ತಿಗೆ ಹುಚ್ಚು ಹಿಡಿದಿದೆಯೇ ಅಲ್ಲ, ನನಗೆ ಮತಿಭ್ರಾಂತ್ರಿಯೇ ?

ಸುನೀತಿ ಹೇಳಿದಳು. “ಇವರು ನನ್ನನ್ನು ಮದುವೆಯಾಗಬೇಕೆಂದು, ಪ್ರಣಯ ಪತ್ರಗಳನ್ನು ಬರೆದಿದ್ದರು. ಈಗ ಕೇಳಿದರೆ ಆಗುವುದಿಲ್ಲವೆನ್ನುತ್ತಾರೆ.”

ಸೀತೆಯೆಂದಳು. “ಹಾಗೇನು ? ನೀವು ನನ್ನ ಅತ್ತಿಗೆಯಾಗಲು ಬಂದಿರುವಿರೇ ? ಬೇಡವೆಂದರೇ ಅಣ್ಣ ?. ಅಣ್ಣಾ, ಅಣ್ಣಾ, – ಬೇಗನೆ ವಿವಾಹಕ್ಕೆ ಸಮ್ಮತಿಯನ್ನು ಕೊಡು. ಇಂತಹ ಸುರಸುಂದರಿ – ನಮ್ಮ ಮನೆಯನ್ನು ಬೆಳಗಲಿರುವ ಭಾಗ್ಯಲಕ್ಷ್ಮಿ – ಬೇರೆಯಾದರೂ ದೊರೆಯಲಿಕ್ಕಿಲ್ಲ. ಅಣ್ಣಾ, ಬೇಗನೆ ಸುಮ್ಮತಿಸು.”

ಎಂತಹ ದುರ್ಧರ ಪ್ರಸಂಗ! ಸೀತಾ ನನಗೆ ಹಾಸ್ಯ ಮಾಡುತ್ತಿದ್ದಾಳೆ!

ಸುನೀತಿಗೆ ಆಶ್ಚರ್ಯವಾದಂತೆ ತೋರಿತು. "ಅಂದರೆ ಇವರಿಗೆ ಇನ್ನೂ ಮದುವೆಯಾಗಲಿಲ್ಲವೇ?"

ಸೀತಾ ನಕ್ಕಳು. "ಅವರಿಗೆ ಮದುವೆಯಾಗಿದ್ದರೆ, ಅವರು ನಿಮಗೆ ಈ ಪ್ರಣಯ ಪತ್ರಗಳನ್ನು ಬರೆಯುತಿದ್ದರೇ ಅತ್ತಿಗೆ? . ಅವರು ತಮ್ಮನ್ನು ಮೊನ್ನೆ ಎಲ್ಲೋ ನೋಡಿದ ನಂತರ, ತಮ್ಮ ಧ್ಯಾನದಲ್ಲಿ ಅನ್ನಾಹಾರಗಳನ್ನು ಬಿಟ್ಟಿದ್ದಾರೆ. ರಾತ್ರೆ ಹಗಲೂ ತಮದೇ ಧ್ಯಾನ. ಯಾವಾಗ್ಯೆ ನೋಡಿದರೂ ತಮಗೆ ಪತ್ರ ಬರೆಯುವುದರಲ್ಲೇ ಮಗ್ನರಾಗಿದ್ದಾರೆ ಅತ್ತಿಗೆ, ಆದಷ್ಟು ಬೇಗನೇ ವಿವಾಹವನ್ನು ಜರಗಿಸೋಣ. ಅಣ್ಣನ ವಿವಾಹದ ವಿಜೃಂಭಣೆಯನ್ನು ಕಾಣಬೇಕೆಂದು ನನ್ನ ಕಣ್ಣುಗಳು ಉತ್ಸುಕತೆಯಿಂದ ಕುಣಿದಾಡುತ್ತಿವೆ. ಎಲ್ಲಿ, ನೆರಮನೆಯಲ್ಲೇ ಜೋಯಿಸರಿದ್ದಾರೆ ದಿನ ನೋಡಿ ಮುಹೂರ್ತವನ್ನು ನಿಶ್ಚಯಿಸೋಣವೇ?"

ಸೀತಾ ಇಷ್ಟು ಮಾತನಾಡುವಾಗ್ಯೆ ಸುನೀತಿ ಬಾಗಿಲಬಳಿ ಮುಟ್ಟಿದ್ದಳು. "ಜೋಯಿಸರೇ? ವಿವಾಹವೇ? ಥೂ ಹಾಳಾಗಿ! ಇಂಪೀರಿಯಲ್ ಬೇಂಕಿನ ಎಲ್ಲಾ ಹಣವನ್ನು ತಂದು, ನನ್ನ ಕಾಲ ಮೇಲೆ ಸುರಿದರೂ, ನಾನು ಈ ಕೋತಿಯನ್ನು ವಿವಾಹವಾಗುವೆನೇ? ಯಾರೋ ನನಗೆ ಮೋಸಗೊಳಿಸಿದರು. ನಾನು ಇವರಿಗೆ ವಿವಾಹವಾಗಿದೆಯೆಂದು ತಿಳಿದಿದ್ದೆ ಎಲ್ಲಾದರೂ ಹಾಳಾಗಿ ಹೋಗಿ, ಇಗೊಳ್ಳಿ ನಿಮ್ಮ ಸುಡುಗಾಡ ಪ್ರೇಮ ಪತ್ರಗಳು!"

ಇಷ್ಟುಹೇಳಿ, ಸುನೀತಾ ನನ್ನ ಎಲ್ಲಾ ಪ್ರಣಯಪತ್ರಗಳನ್ನು ನನ್ನ ಮುಂದೆ ಬಿಸುಟು, ದುರುದುರನೆ ಬೀದಿಗಿಳಿದು, ಕಾರು ಏರಿ, ಕಾಣೆಯಾದಳು.

ಸೀತಾ ಗೊಳ್ಳೆಂದು ನಗಲಾರಂಭಿಸಿದಳು.

ನಾನು ತಲೆಯನ್ನು ಕೆಳಹಾಕಿ, ತಲೆಯ ಮೇಲೆ ಕೈಯಿಟ್ಟು ಕೂತೆ.

ನಕ್ಕು ನಕ್ಕು ಸೋತು ಹೋಗಲು, ಕೊನೆಗೆ ಸೀತೆಯೆಂದಳು. "ಅಲ್ಲ, ಅಷ್ಟು ಬುದ್ಧಿಯಿಲ್ಲದವರು ನೀವು. ಆ ತಾಯಿಮಕ್ಕಳಿಬ್ಬರೂ ತಮ್ಮನ್ನು ಬಲೆಗೆ ಬೀಸಿ, ತಮ್ಮಿಂದ ಆದಷ್ಟು ಹಣವನ್ನು ಹೊಡೆಯುವಾ ಎಂತ ಮಾಡಿದ ಯೋಚನೆ ಇದೆಂದು ತಿಳಿಯಲಿಲ್ಲವೇ ತಮಗೆ? ತಾವು ಯಾವ ರೀತಿ ಅವಳನ್ನು ವಿವಾಹವಾಗುವುದು ಅಸಂಭವವಿತ್ತೋ, ಅದೇ ರೀತಿ ಅವಳು ನಿಮ್ಮನ್ನು ವಿವಾಹವಾಗುವುದು ಅಸಾಧ್ಯವಿತ್ತು."

"ಏಕೆ?" ಎಂದು ಪ್ರಶ್ನಿಸಿದೆ

"ಅವಳಿಗೂ ಈ ಮೊದಲೇ ವಿವಾಹವಾಗಿದೆ."

"ಎಲ ಎಲಾ! ನಿನಗೆ ಹೇಗೆ ಗೊತ್ತು?"

ಅವಳ ಕೊರಳಲ್ಲಿ ಮಾಂಗಲ್ಯಸೂತ್ರವಿರುವುದನ್ನು ಕಾಣಲಿಲ್ಲವೇ ನೀವು? ಮದುವೆಯಾದ ಮೊದಲೇ ಮಾಂಗಲ್ಯಸೂತ್ರ ಕಟ್ಟಿಕೊಳ್ಳುವವರಿದ್ದಾರೆಯೇ?. . ಆದ್ದರಿಂದಲೇ ತಮಗೆ ಮದುವೆಯಾಗಿಲ್ಲ, ತಾವು ವಿವಾಹಕ್ಕೆ ಸಿದ್ಧರಿದ್ದೀರಿ ಎಂದು ತೋರಿಸಿಕೊಟ್ಟೆ ಅವಳಿಗೆ. ಇನ್ನು ತನ್ನ ಬೇಳೆ ಇಲ್ಲಿ ಬೇಯದೆಂದು ಅವಳೇ ಕಾಲಿಗೆ ಬುದ್ಧಿ ಹೇಳಿದಳು" ಎಂದು ನಕ್ಕಳು ಸೀತಾ.

ಏನು ತಲೆ ಸೀತೆಯದು! ಅವಳಿಲ್ಲದಿದ್ದಲ್ಲಿ ಇಂದಿನ ದಿನದಲ್ಲಿ ಆತ್ಮಹತ್ಯೆ ಮಾಡಿಕೊಂಡ ಜನರ ಪಟ್ಟಿಯಲ್ಲಿ ನನ್ನ ಹೆಸರೂ ದಾಖಲಾಗುತಿತ್ತು!

ಜಗ್ಗನೆದ್ದು ಕುಳಿತೆ ಸೀತೆಯನ್ನು ಸನಿಯಕ್ಕೆಳೆದು, "ಸೀತಾ, ನೀನೊಂದು ರತ್ನ!" ಅಂದೆ

---

# " ಗ್ಲೂಕೋಸ್ "

## [ ಪೂರ್ವರಂಗದಲ್ಲಿ ರಾಮು ]

೧

ಏನೋ ಅಂತಾರಲ್ಲ – " ಇಲ್ಲದ ವಸ್ತುವಿಗೆ ಕೇಳಿಕೆ ಜಾಸ್ತಿ !" – ಅಂತ. ಹಾಗಾಯಿತು ನೋಡಿ.

ಕ್ರಿಸ್ತಾಬ್ದ ೧೯೪೫ ರ ಮಧ್ಯಕಾಲ ಮಹಾಯುದ್ಧದ ಬೇಗೆಯು ಬ್ರಹ್ಮಾಂಡವನ್ನೇ ವ್ಯಾಪಿಸಿ, ಅದರ ದಳ್ಳುರಿಗೆ, ಜನತೆ ಬಳಲಿ, ಬೆಂಡಾದ ಕಾಲವದು ಅಗತ್ಯವೆಂದಿದ್ದ ಯಾವ ವಸ್ತು ಬೇಕಿದ್ದರೂ, ಇಲ್ಲವೆನಿಸಿದ್ದ ಕಾಲ. ಅಕ್ಕಿ ಕೇಳಿದರೆ ಇಲ್ಲ, ಸಕ್ಕರೆ ಕೇಳಿದರೆ, ಅದೂ ಇಲ್ಲ, ಗೋಧಿ ಎಂಬ ಹೆಸರೇ ಧಾನ್ಯಗಳ ಪಟ್ಟಿಯಲ್ಲಿಲ್ಲ. ಕೊನೆಗೆ ಸೀಮೆಯೆಣ್ಣೆಯಾದರೂ ಇದೆಯೇ ? ಅದೂ ಇಲ್ಲ.

ಇಂತಹ ಈ ಆಹಾರಪದಾರ್ಥ ಹಾಗೂ ಅಗತ್ಯದ ಸಾಮಗ್ರಿಗಳಿಗೆ ಇದ್ದ " ನಾಸ್ತಿಕವಾದ " ಫಕ್ಕನೆ ಔಷಧಿಗಳ ಮೇಲೂ ಎರಗಬೇಕೆ ?

ಔಷಧ ದ್ರವ್ಯಗಳಲ್ಲಿ ಮೊದಲು ಈ " ಇಲ್ಲದ ವರ್ಗ "ವನ್ನು ಸೇರಿದ್ದು " ಗ್ಲೂಕೋಸ್ !"

ಇದರ ವಿಷಯ ನಿಮಗೆ ತಿಳಿದಿರಬಹುದು ಸಕ್ಕರೆಯಂತೆ ಬೆಳ್ಳಗಿನ ಸಿಹಿ ಹುಡಿ. ಶಕ್ತಿ ಬರಲಿಕ್ಕೆ ಬಹಳ ಉತ್ತಮವಂತೆ.

ಒಂದು ದಿನ ಬೆಳಿಗ್ಗೆ ಎದ್ದು ನೋಡುವಾಗ ಮಂಗಳೂರ ಮಾರ್ಕೆಟ್ಟಿನಲ್ಲಿ "ಗ್ಲೂಕೋಸ್" ಕಾಣೆ! ಇಲ್ಲವೆಂದರೆ ಇಲ್ಲವೇ ಇಲ್ಲ!

ಹಾಗೆಂದು ಡಾಕ್ಟರರಿಗೊಂದ ಅಭ್ಯಾಸ ನೋಡಿ. ರೋಗಿಗಳಿಗೆ ಮದ್ದಿನ ಪ್ರಿಸ್ಕ್ರಿಪ್ಶನ್ ಬರೆಯುವಾಗ ಇಲ್ಲದ ಔಷಧಿಗಳನ್ನೇ ಬರೆದು ಕೊಡುವುದು ಜಾಸ್ತಿ. ಯಾವ ಕಾಯಿಲೆಯೇ ಆಗಲಿ, ಮದ್ದಿನೊಂದಿಗೆ "ಗ್ಲೂಕೋಸ್" ಕೂಡಾ ಕೊಡತಕ್ಕದ್ದೆಂದು ಡಾಕ್ಟರರ ಹೇಳಿಕೆಯಾಯಿತು. "ಗ್ಲೂಕೋಸ್"ನ ಅಭಾವವೇ ಡಾಕ್ಟರರ ಈ "ಭಾವ"ಕ್ಕೆ ಕಾರಣವಾಯಿತು.

ಇನ್ನು ರೋಗಿಗಳೋ? ಡಾಕ್ಟರರ ಈ "ಗ್ಲೂಕೋಸ್" ಚೀಟು ಹಿಡಕೊಂಡು, ಹಲವಾರು ಕೆಮಿಸ್ಟ್ ಅಂಗಡಿಗಳಿಗೆ ಗೋತಾ ಹೊಡೆಯ ತೊಡಗಿದರು.

ಇನ್ನು ಕೆಮಿಸ್ಟರೋ? "ಗ್ಲೂ" ಎಂಬ ಶಬ್ದವನ್ನು ಕೇಳಿದಕೂಡಲೇ "ತಾರಮ್ಮಯ್ಯ" ಮಾಡತೊಡಗಿದರು.

ಅಂತೂ ಇದೊಂದು ಭ್ರಮೆ ನಿಜ!

ಆದರೆ ಯಾರಿಗೆ?

"ಗ್ಲೂಕೋಸ್" ರಹಿತವಾದ ಚಿಕಿತ್ಸೆ ತಿಳಿಯದ ಡಾಕ್ಟರರಿಗೋ?

"ಗ್ಲೂಕೋಸ್" ಎಂದು ಕೇಳಿದ ಮಾತ್ರಕ್ಕೆ ತಾರಮ್ಮಯ್ಯ ಮಾಡುವ ಕೆಮಿಸ್ಟ್‌ಗಳಿಗೋ?

"ಗ್ಲೂಕೋಸ್"ಗಾಗಿ ಒದ್ದಾಡಿ, ಪ್ರಾಣಬಿಡುವ ರೋಗಿಗಳಿಗೋ?

೨

ಏನೋ ಅಂತಾರಲ್ಲ – "ಒಪ್ಪದು ತಪ್ಪದು!" – ಹಾಗಾಯಿತು. ಒಬ್ಬರು ಡಾಕ್ಟರರಲ್ಲಿ ಕಂಪೌಂಡರ್ ಆಗಿ ಸೇರಿದೆ. ಸುತ್ತಲೂ ಮದ್ದಿನ ಸೀಸೆಗಳನ್ನಿಟ್ಟು ಕೊಂಡೆ. ದಿವಸಕ್ಕೆ ದೇವರು ಕೊಟ್ಟ ಇಪ್ಪತ್ತುನಾಲ್ಕು ಗಂಟೆಗಳಲ್ಲಿ ಸಾಧ್ಯ ವಾದಷ್ಟು ಹೆಚ್ಚು ಗಂಟೆಗಳನ್ನು ಆಸ್ಪತ್ರೆಯೊಳಗೇನೇ ಕಳೆಯಲು ಆರಂಭಿಸಿದೆ, ಹಟ ಹಿಡಿದು, ನಮಸ್ಕಾರಗಳನ್ನು ತೆತ್ತು, ಮಂಗಳೂರಿನ ಎಲ್ಲಾ ಡಾಕ್ಟರರುಗಳ ಸ್ನೇಹವನ್ನು ಸಂಪಾದಿಸಿದೆ. ಇಷ್ಟೆಲ್ಲಾ ಮಾಡಿಕೊಂಡು "ಸೀಜ್ ಫ್ರೀಡ್" ಲೈನಿನ ಮಧ್ಯದಲ್ಲಿ ಕುಳಿತಿದ್ದ ಹಿಟ್ಲರನಂತೆ ಆಸ್ಪತ್ರೆಯ "ಎಂಟಿಸೆಪ್ಟಿಕ್"

ವಾತಾವರಣದಲ್ಲೇ ವಾಸಿಸತೊಡಗಿದೆ. ಇಷ್ಟು ಮಾಡಿದರೂ ಫಲವಿಲ್ಲ. ಜರ್ಮನಿಯ " ಸೀಜ್ ಫ್ರೀಡ್ " ಲೈನನ್ನಾದರೂ ಭೇದಿಸಿ, " ಆರ್.ಎ.ಎಫ್." ವಿಮಾನವೊಂದು ಬರ್ಲಿನಿನಲ್ಲಿ ಬಾಂಬೆಸೆದು ಬಂದಂತೆ, " ಶೀತ "ವೆಂಬ ರೋಗವೊಂದು " ಎಂಟಿಸೆಪ್ಟಿಕ್ " ಲೈನನ್ನು ಭೇದಿಸಿ, ನನ್ನ ಮೇಲೆರಗಿತು !

ಕಣ್ಣುಗಳು ಕೆಂಪಾದುವು, ಮೂಗು – ಕಣ್ಣು – ಕಿವಿಗಳಿಂದ ನೀರು ಸುರಿಯಲು ಆರಂಭವಾಯಿತು. ಇಷ್ಟಕ್ಕೆ ಮುಗಿಯಿತೇ ?

ರಾಮನಾಯ್ಕರು ಕೊಟ್ಟ ಎರಡು ಶಿಯಾಳಗಳನ್ನು ಕುಡಿದೆ. ಶೇಸಣ್ಣನು ಪ್ರೀತಿಯಿಂದ ಕೊಟ್ಟ ಒಂದು ಡಜನ್ ರಸಬಾಳೆ ಹಣ್ಣುಗಳನ್ನು ಪ್ರೀತಿಯಿಂದಲೇ ತಿಂದು, ತೇಗಿದೆ. ಸಾಕಾಗದ್ದಕ್ಕೆ ಸೀತೆಯು ಬೇಡಾ ಅಂದರೂ ಕೇಳದೆ ಆಪ್ತ ಮಿತ್ರರ ಒತ್ತಾಯಕ್ಕಾಗಿ, ಪ್ರಾತಃಕಾಲದಲ್ಲೆದ್ದು ಕದಿರೆಗೆ ಹೋಗಿ, ಏಳೂ ಕೆರೆಗಳಲ್ಲಿ ಒಂದೂವರೆ ತಾಸು ನೀರ್ಕುದುರೆಯಂತೆ ಜಲಕೇಳಿಯಾಡಿದೆ. ಅಷ್ಟಕ್ಕೂ ಮುಗಿಯದೆ, ಕದಿರೆಯ ಗುಡ್ಡವನ್ನಾರೋಹಿಸಿ, ಸೂರ್ಯನ ಎಳೆಬಿಸಿಲಿಗೆ ಮೈ ಒಡ್ಡಿದೆ ಅಲ್ಲಿಗಾಯಿತು ! ಏನೋ ಅಂತಾರಲ್ಲ – " ಮರ್ಕಟಸ್ಯ ಸುರಾಪಾನಂ ...." ಅಂತ ! ಆ ರೀತಿ ಆಯಿತು.

ಮೊದಲನೇ ದಿನ ಶೀತ, ಎರಡನೇ ದಿನ ಮೈಕೈ ನೋವು, ಮೂರನೇ ದಿನ ಜ್ವರ.. ಭಯಂಕರ ಜ್ವರ .ಕೊನೆಗೆ ಏನಾಯಿತು ? ಸೀತಾದೇವಿಯೊಡನೆ ಕೇಳಿರಿ

## [ ಮಧ್ಯರಂಗದಲ್ಲಿ ಸೀತಾ ]

### ೧

ಏನೋ ಅಂತಾರಲ್ಲ – " ಅಂಕೆಯಿಲ್ಲದ ಕಪಿ " ಅಂತ. ಆ ರೀತಿ ಮಾಡಿದರು ನಮ್ಮವರು. ಊರಿಗೆಲ್ಲ ಔಷಧಿ ಕೊಟ್ಟು, " ಶೀತ ಆದರೆ ಶಿಯಾಳ ಕುಡಿಯಬೇಡಿರಿ, ತಣ್ಣೀರು ಸ್ನಾನಮಾಡಬೇಡಿ, ಬಾಳೆಹಣ್ಣು ತಿನ್ನಬೇಡಿ " ಅಂತ ಉದ್ದುದ್ದ ಪಥ್ಯ ಹೇಳುವವರು ಶೀತ ಆದ ಕೂಡಲೇ ಶಿಯಾಳ ಕುಡಿದು ಬಾಳೆಹಣ್ಣು ತಿಂದು, ಕದಿರೆಯ ತೀರ್ಥಸ್ನಾನ ಇತ್ಯಾದಿಗಳನ್ನು ಜರುಗಿಸಿದರು.

ನಾನು ತಡೆಯದಿದ್ದಲ್ಲಿ ಮೂಲ್ಕಿಯ ಪ್ರತಿಷ್ಠಾ ಪೂರ್ಣಿಮೆಗೂ ಹೋಗುತಿದ್ದರು. ನಾನು ಅಡ್ಡ ಬಂದೆ ಅಲ್ಲ, ನನಗೆ ಹಲವು ವೇಳೆ ತೋರುತ್ತದೆ – ನಮ್ಮಂಥಾ ಹೆಂಗಸರು ಇಲ್ಲದಿರುತ್ತಿದ್ದರೆ, ಇಂಥಾ ಕೆಲವು ಗಂಡಸರ ಗತಿಯೇನು ?

ಮೊದಲನೇ ದಿನ ಒಳ್ಳೇ ಮೆಣಸನ್ನು ಅರೆದು, ತಲೆಗೊಂದು ಲೇಪ ಹಾಕಿದೆ. ಮರುದಿನ "ಅಯ್ಯಬ್ಬ, ಕಣ್ಣು ಉರಿಯುತ್ತಿದೆ" ಅಂತ ಬೊಬ್ಬಿಟ್ಟರು. ಡಾಕ್ಟರರಲ್ಲಿಗೆ ಹೋದೆ – ಅವರ ಧನಿಯವರಲ್ಲಿ ! ಒಂದು ದಿನದ ಔಷಧಿಯನ್ನೂ, ನಾಲ್ಕು ದಿನಗಳ ರಜೆಯನ್ನೂ ಪಡಕೊಂಡು ಬಂದೆ ಮೂರನೇ ದಿನ ಮೈಕಾದು, ಕೆಂಡವಾಯ್ತು. ಡಾಕ್ಟರರನ್ನು ಕರಕೊಂಡು ಬಂದೆ. ಪರೀಕ್ಷಿಸಿ, "ಬರೇ ಇನ್‌ಫ್ಲೂಯೆಂಜಾ, ಗಾಬರಿಯಿಲ್ಲ. ತಲೆಗೆ ಕಚ್ಚೂರಾದಿ ಚೂರ್ಣ ಇಡಿ" ಅಂದರು. ಹೋಗಿ, ಕಚ್ಚೂರಾದಿ ಚೂರ್ಣ ತಂದು, ಸಂಬರ ಬಳ್ಳಿ ಸೊಪ್ಪಿನ ರಸದಲ್ಲಿ ಅರೆದು ನೆತ್ತಿಗೆ ಇಟ್ಟೆ. ನಾಲ್ಕನೇ ದಿನ ಸ್ವಲ್ಪ ಆರಾಮವೆನಿಸಿತು – ಅಂತ ತೋರುತ್ತದೆ. ಮಲಗಿದ್ದಲ್ಲಿಂದ ಎದ್ದು ಅಡಿಗೆ ಕೋಣೆಗೆ ಬಂದರು.

ಒಲೆಯ ಮೇಲೆ ಕಾಫಿಗೆ ಇಟ್ಟಿದ್ದೆ. "ಹೌದೇನೇ ?" ಅಂದರು.

ಒಲೆಯೊಳಗಿನ ಬೆಂಕಿಯನ್ನು ಸರಿಗೊಳಿಸುತ್ತಾ "ಏನ್ರೀ" ಅಂದೆ. ಒಂದು ಮಣೆಯನ್ನು – ಒಲೆಯಿಂದ ಸ್ವಲ್ಪ ದೂರದಲ್ಲಿ ಇಟ್ಟೆ. ಅದನ್ನು ನನ್ನ ಹತ್ತಿರ ಎಳಕೊಂಡು ಕೂತರು "ಯಾಕ್ರೀ ? ನಿನ್ನೆ ಜ್ವರ ಬಂದಿತ್ತು. ಇವತ್ತು ಬಿಟ್ಟಿದೆ ಅಷ್ಟೆ ! ಈ ರೀತಿ ಬೆಂಕಿಯ ಜ್ವಾಲೆಗೆ ಮೈ ಒಡ್ಡಿ, ಕೂತುಕೊಳ್ಳ ಕೂಡದು !" ಅಂದೆ.

"ಓಹೋ, ಭಾರೀ ಕಲಿತು ಬಂದಿಯೇ ?" ಅಂದರು.

"ಮತ್ತೇನು ? ಎಂಟು ವರ್ಷಕಾಲ ಡಾಕ್ಟರರಲ್ಲಿ ಇದ್ದು ಒಂದು ಸಾಸಿವೆಯಷ್ಟಾದರೂ ಬುದ್ಧಿ ನಿಮಗೆ ಬಂದಿಲ್ಲವೆಂದು, ನಿಮ್ಮ ಕೈ ಹಿಡಿದು ಏಳು ವರ್ಷಗಳಲ್ಲಿ ನನಗೆ ಸ್ವಲ್ಪವಾದರೂ ಬುದ್ಧಿ ಬರಲಿಲ್ಲವೆಂದೆಣಿಸಿದಿರೇನೋ ?" ಅಂದೆ.

ಈ ರೀತಿ ಬೇಡವೆಂದರೂ ಕೇಳದೆ, ಒಲೆಯ ಬಳಿಯಲ್ಲಿ ಒಂದು ಗಂಟೆಕಾಲ ಹರಟೆ ಕೊಚ್ಚಿದರು, ಕಾಫಿ ಕುಡಿದು ಹೋಗಿ ಮಲಗಿಕೊಂಡರು.

ರಾತ್ರಿ ಪುನಃ ಭಯಂಕರ ಜ್ವರ ! ಏನೇನೋ ಮಾತನಾಡಲು ಆರಂಭಿಸಿದರು. ನನಗೆ ಗಾಬರಿಯಾಯಿತು ಅವರ ಧನಿಯವರಲ್ಲಿ ಹೋಗಿ, ಕರಕೊಂಡು

ಬರುವ ಅಂದರೆ ಅವರ ಮನೆಗೆ ಎರಡು ಮೈಲು ದೂರ! ಮಧ್ಯರಾತ್ರಿಯಲ್ಲಿ ಒಬ್ಬಂಟಿಗಳು ನಾನು ಹೇಗೆ ಹೋಗಬೇಕು? ಕೊನೆಗೆ ಯೋಚಿಸಿ, ಮನೆಯ ಹತ್ತಿರದಲ್ಲೇ ಇದ್ದ ಡಾಕ್ಟರರಿಗೆ ಶರಣು ಹೋದೆ!

ಡಾಕ್ಟರರು ಪರೀಕ್ಷೆ ನಡೆಸಿದರು. ಅರ್ಧ ಗಂಟೆಯ ಕಾಲ! ಕೊನೆಗೆ " ಸ್ಟೆತಸ್ಕೋಪ"ನ್ನು ಕಿವಿಯೊಳಗೆ ತುರುಕಿಸಿ, ಕೈತೊಳೆಯುತ್ತಾ "ಟ್ಯಾಫ್ಯಾಡ್" ಎಂದು ತೀರ್ಪು ಕೊಟ್ಟರು

ಪರಮಾತ್ಮಾ!

೨

ಮರು ದಿನ ಮಧ್ಯಾಹ್ನ ಸ್ವಲ್ಪ ತಿಳುವು ಬಂತೆಂದು ತೋರುತ್ತದೆ. ಕರೆದರು, " ಸೀತಾ!" ಎಂದು

ಎದ್ದು ಬಳಿಗೆ ಹೋಗಿ, ತಲೆದೆಸೆಯಲ್ಲಿ ಕುಳಿತೆ ಅಸ್ತವ್ಯಸ್ತವಾಗಿದ್ದ ಹೊದಿಕೆಯನ್ನ ಸರಿಗೊಳಿಸಿದೆ ಮೆಲ್ಲನೆ ಅವರ ತಲೆಯನ್ನೆತ್ತಿ, ನನ್ನ ತೊಡೆಯ ಮೇಲೆ ಇಟ್ಟುಕೊಂಡೆ. " ಆರಾಮವೆನಿಸುತ್ತಿದೆಯೇ ಈಗ?" ಎಂದು ಕೇಳಿದೆ.

" ಹಾ ಆದರೆ ಹೊಟ್ಟೆಯಲ್ಲಿ ವೇದನೆಯಾಗುತ್ತಿದೆ" ಅಂದರು. ಸ್ವಲ್ಪ ಬಾರ್ಲಿನೀರು ಕುಡಿಸಿದೆ

" ನಿನ್ನೆ ಡಾಕ್ಟರರು ಬಂದಿದ್ದರೇನೇ?" ಎಂದು ಕೇಳಿದರು

" ಹೂಂ" ಅಂದೆ.

" ಏನಂದ್ರೇ ಅವರು?"

" ಏನಿಲ್ಲ, ಬರೇ ಶೀತದ ಜ್ವರ ಅಂತೆ ಇನ್ನೂ ನಾಲ್ಕೈದು ದಿನಗಳಲ್ಲಿ ಹುಷಾರಾಗಬಹುದು – ಎಂದಿದ್ದಾರೆ. . ಇನ್ನು ಸುಖವಾಗಿ ಮಲಗಿಕೊಳ್ಳಿ, ಮಾತನಾಡಿ ಆಯಾಸಮಾಡಿಕೊಳ್ಳಬೇಡಿ" ಅಂದೆ.

೩

ಸಾಯಂಕಾಲ ಪುನಃ ಜ್ವರ. ಡಾಕ್ಟರರು ಬಂದರು, ಪರೀಕ್ಷಿಸಿದರು. ಥರ್ಮಾಮಿಟರು ಇಟ್ಟು ನೋಡಿದರೆ ೧೦೪.೮ !!!

ಕೈ ತೊಳಕೊಳ್ಳುತ್ತಾ ಡಾಕ್ಟರರೆಂದರು. " ಏನ್ರಮ್ಮ! ಅವರಿಗೆ ಬಹಳ

ನಿತ್ರಾಣವಿದೆ, ಜ್ವರವು ಬಿಗುವಿದೆ. ಅವರಿಗೆ "ಗ್ಲೂಕೋಸ್" ಕೊಡಲಿಕ್ಕೇ ಬೇಕು!"

"ನಿಮ್ಮಲ್ಲಿದ್ದರೆ ಕಳುಹಿಸಿಕೊಡ್ರಿ!" ಅಂದೆ

"ನಮ್ಮಲ್ಲಿಲ್ಲಮ್ಮ! ಚೀಟು ಬರಕೊಡ್ತೀನಿ. ಎಲ್ಲಾದರೂ ಕೆಮಿಸ್ಟ್ ಶಾಪುಗಳಲ್ಲಿ ಸಿಕ್ಕಬಹುದು!" ಅಂದರು

೪

ಮರುದಿನ ಇಡೀ ಮಂಗಳೂರಿನಲ್ಲಿ ಹುಡುಕಿದರೂ "ಗ್ಲೂಕೋಸೇ" ಇಲ್ಲ. ಸಾಯಂಕಾಲ ಡಾಕ್ಟರರು ಬಂದರು. ಥರ್ಮಾಮಿಾಟರಿನಿಂದ ಪುನಃ ೧೦೪.೮!!!

"ಏನ್ರಮ್ಮಾ – ಗ್ಲೂಕೋಸ್ ಸಿಕ್ಕಿತೇ?" ಅಂದರು. ತಲೆಯಲುಗಿಸಿದೆ.

"ಗ್ಲೂಕೋಸ್ ಕೊಡಲೇ ಬೇಕು!"

"ನಾಳೆ ಹೇಗಾದರೂ ಸಾಧನೆಯಿಂದ ಸಂಪಾದಿಸುತ್ತೇನೆ!" ಅಂದೆ.

೫

ರಾತ್ರೆ ಮೈ ಕೆಂಡದಂತೆ ಕಾದಿತು ಸಾಧಾರಣ ಹನ್ನೊಂದು ತಾಸಾಗಿರಬಹುದು. ಮೆಲ್ಲನೆ ಕರೆದರು "ಸೀತಾ!"

ಅಲ್ಲೇ ಸಮಿಾಪದಲ್ಲಿ "ಬೆಡ್‌ಲ್ಯಾಂಪಿ"ನ ಬೆಳಕಿನಲ್ಲಿ ರಾಮಾಯಣವನ್ನೋದುತ್ತಿದ್ದೆ ಮೆಲ್ಲನೆ ಹಾಸಿಗೆಯ ಮೇಲೆ ಕುಳಿತು, ಅವರ ಮುಂಗುರುಳುಗಳನ್ನು ಸವರುತ್ತಾ, "ಏನ್ರೀ?" ಅಂದೆ.

"ಅಲ್ಲ ನನ್ನಿಂದಾಗಿ ನಿನಗೆಷ್ಟು ಕಷ್ಟವೇ?" ಅಂದರು.

"ಕಷ್ಟ ಏನ್ರೀ! ನಿಮ್ಮ ಸೇವೆಗಾಗಿಯೇ ಅಲ್ಲವೇನ್ರೀ ನನ್ನ ಜೀವನ?"

"ರಾತ್ರಿ ಬಹಳ ಆಯಿತೆಂದು ಕಾಣಸ್ತೆ! ಯಾಕಿನ್ನೂ ಮಲಕೊಳ್ಳಿಲ್ಲ?"

"ನಿದ್ದೆ ಬರುವುದಿಲ್ಲರಿ. ಏನೋ ರಾಮಾಯಣ ಓದುತ್ತಿದ್ದೇನೆ"

"ಸೀತಾ, ಸುಳ್ಳು ಸುಳ್ಳೆ ಹೇಳುತ್ತಿ " ಅಂದರು.

"ಏನ್ರೀ ಸುಳ್ಳು ಹೇಳಿದೆ?" ಎಂದು ಕೇಳಿದೆ.

ಅವರ ಮುಂದಲೆಯ ಮೇಲೆ ಆಡುತ್ತಿದ್ದ ಎಡಗೈಯನ್ನು ಬಲವಾಗಿ ಹಿಡಕೊಂಡರು. "ಸೀತಾ ನೀನು ನಿಜವಾಗಿಯೂ, ನನ್ನ ಪಾಲಿನ ದೇವಿ!"

" ಬಿಡ್ರೀ.. ಆ ಮಾತುಗಳನ್ನು ! ಬಾಯಾರಿದೆಯೆ ? ಸ್ವಲ್ಪ ಬಾರ್ಲಿ ನೀರು ಕುಡಿಸಲೇ ? " ಎಂದು ಕೇಳಿದೆ.

" ಹೂಂ " ಅಂದರು

ಮೆಲ್ಲನೆ ಎದ್ದು, ಮೇಜಿನ ಮೇಲಿದ್ದ ಬಾರ್ಲಿಯ ನೀರನ್ನೆತ್ತಿ ಕುಡಿಸಿದೆ. ಕುಡಿಯುತ್ತಾ, " ಏನು ಹಾಕಿದೆಯೇ ಬಾರ್ಲಿಗೆ ?" ಅಂತ ಪ್ರಶ್ನಿಸಿದರು.

" ಸಕ್ಕರೆ !" ಅಂದೆ

" ಡಾಕ್ಟರರು ಹೇಳಿದರಲ್ಲೇನೇ – ಗ್ಲೂಕೋಸ್ ಕೊಡಬೇಕಂತ ?"

" ಹೌದ್ರೀ , ಇವತ್ತು ಆ ಫಾರ್ಮಸಿಯಲ್ಲಿ ಮುಗಿದಿತ್ತು. ನಾಳೆ ಕೊಡುತ್ತೇನೆ – ಅಂದಿದ್ದಾರೆ " ಅಂದೆ.

೬

ನಾಳೆ ಕೊಡುತ್ತೇನೆ – ಅಂದಿದ್ದಾರೆ, ಯಾರು ? ಯಾರು ?? ಯಾರು ???

ಕಾಲುಹಿಡಿದೆ, ನೆರಗೊಡ್ಡಿ ಬೇಡಿದೆ. ನನ್ನ ಮಾಂಗಲ್ಯಸೂತ್ರದ ಆಧಾರ ಗ್ಲೂಕೋಸ್‌ನಲ್ಲಿದೆ, ಅದನ್ನು ಉಳಿಸಿದ ಪುಣ್ಯ ನಿಮಗೆ – ಅಂದೆ. ಆದರೆ ನನ್ನದು ವನರೋದನವಾಯಿತು ನನ್ನ ಕಣ್ಣೀರಿಗೆ ಸಹಾರದ ನಡುವಿನಲ್ಲಾದರೂ ಕಾರಂಜಿ ಪುಟಿಯಬೇಕಿತ್ತು ! ಆದರೆ.

ಮಧ್ಯಾಹ್ನ ಡಾಕ್ಟರರು ಬಂದರು ಥರ್ಮಾಮಿಟರ್ ೧೦೪ ೮ !!! " ಗ್ಲೂಕೋಸ್ ಸಿಕ್ಕಿತೇ ?" ಎಂಬ ಪ್ರಶ್ನೆ.

" ಇಲ್ಲ " ಅಂದೆ.

" ಬಹಳ ನಿತ್ರಾಣವಿದೆ. ಗ್ಲೂಕೋಸ್ ಇಲ್ಲದೆ ಹೇಗೊ ?" ಅಂದರು.

ಸಾಯಂಕಾಲವಾಗುತ್ತಾ ಜ್ವರ ಮತ್ತೂ ಏರಿತು. ಅವರಿಗೆ ಸ್ಮೃತಿ ಇಲ್ಲ ! ಏನೇನೋ ಹರಟಲು ಆರಂಭ ! ಊರಲ್ಲಿಲ್ಲದ ಮಾತು ಕಿವಿಯಿಂದ ಕೇಳದ ವಾರ್ತೆ ಹೆದರಿದೆ ಡಾಕ್ಟರರನ್ನು ಕರೆಕಳುಹಿದೆ ಬಂದರು. ಪರೀಕ್ಷಿಸಿದರು. ಜ್ವರವು ಅಷ್ಟೇ ಇದೆ – ಅಂದರು. ಆದರೆ ನಿತ್ರಾಣವು ಬಹಳವಾಗಿದೆ. ಅದರ ಫಲವಾಗಿ ವಿಸ್ಮೃತಿ. ಹರಟೆ ಗಲಭೆ . ಗ್ಲೂಕೋಸ್ ಇಲ್ಲವಲ್ಲ. . ನನ್ನ ಅಲುಗುವ ಶಿರಸ್ಸೇ ಉತ್ತರ !!

ನಿತ್ರಾಣ ಅದಕ್ಕೆ ರಾಮಬಾಣ. ಗ್ಲೂಕೋಸ್... ಊರಲ್ಲೇ ಸಿಗದ

ಗ್ಲೂಕೋಸ್ .ಏನು ಮಾಡಲಿ?...ಯಾರನ್ನು ಮರೆಹೋಗಲಿ. .ಅರ್ಧ ತಾಸಿನ ನಂತರ ಮನಸ್ಸನ್ನು ಗಟ್ಟಿಮಾಡಿದೆ!

೭

ಮರು ದಿನ ಪ್ರಾತಃಕಾಲ ಜ್ವರವು ಸ್ವಲ್ಪ ಇಳಿಯಿತು. ಕರೆದರು ನನ್ನನ್ನು ಸಮೀಪಕ್ಕೆ. ಹೋಗಿ, ಹಾಸಿಗೆಯ ಮೇಲೆ ಕುಳಿತೆ "ಬಾಯಾರಿಕೆಯಾಗಿದೆ. .. ಸ್ವಲ್ಪ ಬಾರ್ಲಿ. .." ಅಂದರು.

ಕುಡಿಸಿದೆ – ಕುಡಿದರು. "ಗ್ಲೂಕೋಸ್ ಸಿಕ್ಕಿತೇನೇ?" ಅಂದರು.

"ಹೂಂ, ಅದನ್ನೇ ಹಾಕಿದ್ದೇನೆ ಬಾರ್ಲಿಗೆ!" ಅಂದಂದು ಗ್ಲೂಕೋಸಿನ ಡಬ್ಬವನ್ನು ತೋರಿಸಿದೆ.

ಮಧ್ಯಾಹ್ನಕ್ಕೆ ಡಾಕ್ಟರರು ಬಂದರು. ಬಂದವರೇ, "ಹೇಗಿದೆ ಈಗ? ... ಗ್ಲೂಕೋಸ್ ಸಿಕ್ಕಿತೇ?" ಅಂತ ಪ್ರಶ್ನಿಸಿದರು.

ಪರೀಕ್ಷೆಯಾಯಿತು. "ಹೂಂ, ಇನ್ನು ಏರಲಿಕ್ಕಿಲ್ಲ ಜ್ವರ. ಔಷಧಿ ಸ್ವಲ್ಪ ಬದಲಾಯಿಸಿ ಕಳುಹಿಸುತ್ತೇನೆ. ಆದರೆ ಗ್ಲೂಕೋಸನ್ನು ಕೊಡುತ್ತಾ ಇರಿ. ಬಾರ್ಲಿಗೆ, ಹಾಲಿಗೆ, ಬಿಸಿನೀರಿಗೆ – ಈ ರೀತಿ ದಿವಸಕ್ಕೆ ಕಡಿಮೆಯೆಂದರೆ ಏಳೆಂಟು ಚಮಚೆಯನ್ನಾದರೂ ಕೊಡಿರಿ" ಅಂದರು.

"ಹೂಂ" ಅಂದೆ.

ಸಾಯಂಕಾಲ ಹಾಲನ್ನು ಕುಡಿಯುವಾಗ ಅವರೆಂದರು. "ಹೌದೇನೇ? ಎಷ್ಟು ರುಚಿಯಾಗಿದೆ ಹಾಲು? ಗ್ಲೂಕೋಸ್ ಹಾಕಿದರೆ ಅದರ ರುಚಿಯೇ ಬೇರೆ."

"ಅಲ್ಲವೇ ಮತ್ತೆ? ಗ್ಲೂಕೋಸ್ ಅಂದರೆ ಎಷ್ಟೆಂದರೂ ಸಕ್ಕರೆಗಿಂತಲೂ ಮೇಲಲ್ಲವೇ?"

"ಹೂಂ, ನೋಡು. ಈಗಲೇ ನನಗೆ ಸ್ವಲ್ಪ ತ್ರಾಣ ಬಂದಂತೆ ತೋರುತ್ತದೆ ನೋಡೇ, ಈಗಲೇ ಎದ್ದು ಕುಳಿತುಕೊಳ್ಳಲೇ?"

"ಹೂಂ, ನಾಲ್ಕು ಸಲ ಗ್ಲೂಕೋಸ್ ಕುಡಿದು, ಎದ್ದು ಕುಳಿತುಕೊಳ್ಳಲು ಆರಂಭಿಸಿದ ನೀವು, ಇನ್ನು ನಾಲ್ಕು ಸಲ ಗ್ಲೂಕೋಸ್ ಸೇವಿಸಿದರೆಂದರೆ, ಎದ್ದು

ಆಫೀಸಿಗೂ ಹೋಗುವಿರಿ! ಸುಮ್ಮನೆ ಮಲಗಿರಿ. ಅಲುಗಾಡಲು ಸಹ ಕೂಡದು ಅಂದಿದ್ದಾರೆ ಡಾಕ್ಟರರು!" ಅಂದೆ.

ಹಾಯಾಗಿ ಮಲಕೊಂಡರು.

ಆ ದಿನದ ನಂತರ ಜ್ವರವು ವಿಪರೀತಕ್ಕೇರಲಿಲ್ಲ.

ಈ ರೀತಿ "ಟ್ಯಾಫ್ಯಾಡ್" ನೊಡನೆ ಕಾದಾಡಿ, ಮೃತ್ಯುವಿನೊಡನೆ ಸೆಣಸಾಡಿ, ಗೆದ್ದೆ ನಾನು ಅವರು ದಿನ ಕಳೆದಂತೆ ಹುಷಾರಾಗುತ್ತಾ ಬಂದರು.

ಒಂದು ದಿನ ಸಾಯಂಕಾಲ

ಅಲ್ಲ ನನಗೆ ನಾಚಿಕೆ ಯಾಗುತ್ತದೆ. ಅವರೊಡನೆ ಕೇಳಿ.

## [ಉತ್ತರ ರಂಗದಲ್ಲಿ ರಾಮು]

ಏನೋ ಅಂತಾರಲ್ಲ – "ಸ್ತ್ರೀಯಶ್ಚರಿತ್ರಂ" – ಅಂತ. ಹಾಗಾಯಿತು. ಅಲ್ಲ, ಒಬ್ಬ ಡಾಕ್ಟರರಿಗೂ ನನ್ನಂತಹ ಕಂಪೌಂಡರನಿಗೂ ಮೋಸಗೊಳಿಸಿದಳು ಎಂದರೆ ???

ನನಗೆ ಟ್ಯಾಫ್ಯಾಡ್ ಬಡಿಯಿತು. ನಡುವಿನಲ್ಲಿ ನಾಲ್ಕೈದು ದಿನ ಬಹಳ "ಸೀರಿಯಸ್" ಆಗಿತ್ತಂತೆ ನನಗೇನು ಗೊತ್ತು! ಯಾವ ಲೋಕದಲ್ಲಿದ್ದೆನೋ ನಾನು ಪುಣ್ಯಾತ್ಮ?

ಡಾಕ್ಟರರು "ಗ್ಲೂಕೋಸ್" ಅಂದರಂತೆ. ಗ್ಲೂಕೋಸ್ ಇಲ್ಲದೆ, ಟ್ಯಾಪ್ಯಾಡ್‌ನಂತಹ ಕಾಯಿಲೆಯಿಂದ ಮೇಲೆ ಬೀಳುವುದು ಕಷ್ಟ – ಅಂತ ನನಗೂ ಗೊತ್ತು ನಾನು "ಗ್ಲೂಕೋಸ್" ಅಂತಲೇ ಚೀರಿದೆನಂತೆ. ಹನುಮಂತನು ದ್ರೋಣಾಚಲದಿಂದ ಸಂಜೀವಿನಿಯನ್ನು ತಂದಂತೆ, "ಗ್ಲೂಕೋಸ್ ರಹಿತವಾದ ಮಂಗಳೂರಿನ ಪೇಟೆ" ಯಿಂದ ಸೀತಾ ಗ್ಲೂಕೋಸ್ ತಂದಳು !!!

ಜ್ವರ, ಸಂಪೂರ್ಣವಾಗಿ ಬಿಟ್ಟು, ಹತ್ತು – ಹನ್ನೆರಡು ದಿನಗಳಾಗಿದ್ದವು. ಆದರೂ ಸಂಪೂರ್ಣ ವಿಶ್ರಾಂತಿ ತಕ್ಕೊಳ್ಳಬೇಕು, ಹಾಸಿಗೆಯಿಂದ ಅಲುಗ ಕೂಡದು – ಎಂದು ಡಾಕ್ಟರರ ಕಟ್ಟಪ್ಪಣೆ ಇತ್ತು. ಆದರೆ, ನೆಟ್ಟಗಿರುವಾಗ ಒಂದು ನಿಮಿಷವಾದರೂ ಸಮ್ಮನೆ ಬಿದ್ದಿರಲಾರದ ಜೀವ, ಎಷ್ಟು ದಿನವೆಂದು ಸುಮ್ಮನೆ ಆಲಸ್ಯದಿಂದ ಬಿದ್ದುಕೊಂಡೀತು ?

ಸಾಯಂಕಾಲದ ಹೊತ್ತು. ಸೀತಾ ಅಡಿಗೆ ಕೋಣೆಯಲ್ಲಿದ್ದಳು. ಮೆಲ್ಲನೆ ಎದ್ದು ಅಡಿಗೆಯ ಕೋಣೆಗೆ ಬಂದೆ.

ಅರೆಯುವ ಕಲ್ಲಿನ ಮೇಲೆ, ಸೀತಾ ಏನನ್ನೋ ಕುಟ್ಟಿ, ಚೂರ್ಣ ಮಾಡುತಿದ್ದಳು. "ಏನೇ ಇದು?" ಅಂದೆ.

ಸೀತಾ ತಲೆಯೆತ್ತಿದಳು ಕಲ್ಲುಸಕ್ಕರೆ. "ಕಲ್ಲುಸಕ್ಕರೆ! ಪುಡಿಮಾಡುತ್ತಿದ್ದೇನೆ" ಅಂದಳು.

"ಏಕೆ? ಇವತ್ತು ಗ್ಲೂಕೋಸ್ ಸಿಕ್ಕಲಿಲ್ಲವೇ?" ಅಂತ ಕೇಳಿದೆ.

"ಇವತ್ತೂ ಸಿಕ್ಕಲಿಲ್ಲ, ಈ ಮೊದಲೂ ಸಿಕ್ಕಲಿಲ್ಲ, ಇನ್ನು ಮುಂದೆ ಸಿಗುವ ಆಸೆಯೂ ಇಲ್ಲ. ಈ ಸಕ್ಕರೆಯನ್ನು ಹುಡಿಮಾಡಿ, ಆ ಖಾಲಿ ಗ್ಲೂಕೋಸ್ ಡಬ್ಬ – ಅದಕ್ಕೆ ಪೇರಿ ಮಾಪಿಳ್ಳೆಗೆ ಎರಡಾಣೆ ಕೊಟ್ಟಿದ್ದೇನೆ – ಆ ಡಬ್ಬಕ್ಕೆ ತುಂಬಿಸಿ ಬಿಟ್ಟರೆ ಆಯಿತು ಗ್ಲೂಕೋಸ್!"

ಸ್ತಂಭಿತನಾದೆ " ಅಂದರೆ? "

"ಅಂದರೆ ಗ್ಲೂಕೋಸ್ ಇಲ್ಲದೆ ಡಾಕ್ಟರರು ಚಿಕಿತ್ಸೆ ನಡೆಸಲು ಕೇಳದಿದ್ದರೆ, ನೀವು ಹುಷಾರಾಗಲು ಒಪ್ಪದಿದ್ದರೆ, ಊರಲ್ಲೇ ಸಿಕ್ಕದಿದ್ದ ಗ್ಲೂಕೋಸನ್ನು ನಾನೇ ಮಾಡಬೇಕಾಯಿತು!!!"

ಅಲ್ಲ, ಏನು ಬುದ್ಧಿ ಈ ಹುಡುಗೀದು ಅಂತ!!!

---

# ಸೀತೆಯ ರಾಶಿಭವಿಷ್ಯ

ಏನು ಗ್ರಹಗತಿ ಇದು ?

ಆ ಮಟಮಟ ಮಧ್ಯಾಹ್ನದ ಉರಿಬಿಸಿಲಿಗೆ, ಆಫೀಸಿನಿಂದ ಎರಡು ಮೈಲು ರೈಲಾಫೀಸಿಗೆ ನಡೆದು, ಓಡಿ, ಕೊನೆಗೂ ರೈಲಾಫೀಸನ್ನು ಮುಟ್ಟಿ, ಹಣೆಯಿಂದ ಧಾರಾಕಾರವಾಗಿ ಇಳಿಯುತ್ತಿದ್ದ ಬೆವರನ್ನು ಸಹ ಒರಸದೆ, ಟಿಕೆಟ್ ಆಫೀಸಿನ ಕಿಟಕಿಯ ಮುಂದೆ ಹಾಜರಾಗಿ, " ಕಾಸರಗೋಡು – ಮೂರನೇ ಕ್ಲಾಸ್ ಒಂದು ಟಿಕೆಟ್ " ಎಂದು ಅರಚಿದರೂ ಟಿಕೆಟ್ ಕೊಡುವ ಅನಾಮಿ – " ವೆರ್‍ರಿ ಸಾರ್‍ರಿ , ಟೂ ಲೇಟ್ , ಟ್ರೈನ್ ಗಾನ್ " ಅಂತ ಟೆಲಿಗ್ರಾಫ್ ಭಾಷೆಯಲ್ಲಿ ನುಡಿದು, ನನ್ನತ್ತ ಬೆನ್ನು ಹಾಕಿರಬೇಕೇ ?

ಸೋತ ದೇಹಭಾರವನ್ನು ಅಲ್ಲೇ ಇದ್ದ ಒಂದು ಬೆಂಚಿನ ಮೇಲೆ ಏರಿಸಿ, ಕಿಸೆಯಿಂದ ಎಲವಸ್ತ್ರವನ್ನು ತೆಗೆದು, ಮೊಗದ ಬೆವರನ್ನೊರಸಿದೆ.

ನನ್ನ ತಂಗಿಯ ಮನೆ ಕಾಸರಗೋಡಿನಲ್ಲಿ. ವರ್ಷಕ್ಕೊಮ್ಮೆಯಾದರೂ ಹೋಗಿ ನೋಡಿ ಬರೋಣ – ಅಂದರೆ ನಮ್ಮ ಆಫೀಸೆಂದರೆ ಸೆಂಟ್ರಲ್ ಜೈಲಿನಂತೆ. ಒಳಗೆ ಹೊಕ್ಕುವುದೇ ಸುಲಭ , ಹೊರಬರುವುದು ಪ್ರಯಾಸ ! ಮದ್ದಿನ ಆಸ್ಪತ್ರೆಯಾದುದರಿಂದ, ಅದಕ್ಕೆ ವೇಳೆ – ಗಳಿಗೆ – ರಜೆ ಎಂಬ ರಗಳೆಗಳೇ ಇಲ್ಲ. ಸೂರ್ಯೋದಯವಾಯಿತೆಂದರೆ ಆಸ್ಪತ್ರೆಯ ಕೆಲಸಕ್ಕೆ ಕಂಪೌಂಡರ್ ಹಾಜರಾಗಬೇಕು. ನಂತರ ಮಧ್ಯಾಹ್ನದ ಊಟಕ್ಕೆ ಬಿಡುವೆಂದರೆ – ರೋಗಿಗಳ

ಗಲಭೆ ಮುಗಿದು ಲೆಕ್ಕಪತ್ರ ತೀರಿಸಿ, ಮನೆಗೆ ಹೊರಡುವಾಗ್ಯೆ ಮಧ್ಯಾಹ್ನ ಮೀರಿ, ಸಾಯಂಕಾಲವಾದುದೂ ಇದೆ ಹಲವೊಮ್ಮೆ ಮಧ್ಯಾಹ್ನದ ಮತ್ತು ರಾತ್ರಿಯ ಬಾಬ್ತು ಎರಡು ಊಟಗಳನ್ನು ರಾತ್ರಿಯ ಒಂದೇ ಊಟದಲ್ಲಿ ತೀರಿಸಿ, ರೇಶನ್ ಕಾಲದ ಆಹಾರ ಮಂತ್ರಿ ಮುನ್ಷಿಮಹಾಶಯರ "Miss a Meal" ಚಳವಳಿಗೆ ಸಹಕರಿಸಿದ್ದೂ ಇದೆ ಹೀಗಿರುವಾಗ ಊರಲ್ಲಿ ಕಮ್ಯೂನಿಸ್ಟ್ ಭೂಪತಿಗಳ ಗಲಭೆ ಹೆಚ್ಚಾಗಲು ವಾರಕ್ಕೊಂದು ದಿನ ರಜೆ ಕೊಡುವ ಕ್ರಮ ಮಂಗಳೂರಲ್ಲಿ ಜಾರಿಗೆ ಬಂತು ಆದರೆ ಮದ್ದಿನ ಆಸ್ಪತ್ರೆಗಳಿಗೆ ಅದು "ಲಗವಾ"ಗು ವುದಿಲ್ಲವೆಂದೂ ಆಸ್ಪತ್ರೆಯ ಡಾಕ್ಟರರಿಗೆ ಅದರ "ಲಗಾಮು" ಹಿಡಿಯುವುದಿಲ್ಲ ವೆಂದೂ, ನಮ್ಮ ಆಸ್ಪತ್ರೆಯಲ್ಲಿ ವಾರಕ್ಕೆ ಅರ್ಧ ದಿನ ಅರ್ಥಾತ್ ರವಿವಾರ ಮಧ್ಯಾಹ್ನದ ನಂತರ – ರಜೆ – ಎಂಬ ಹೊಸಕ್ರಮು ಜಾರಿಗೆ ಬಂತು. "ಪಾಲಿಗೆ ಸಿಕ್ಕಿದ್ದೇ ಪಂಚಾಮೃತ" ಎಂದು ಅಷ್ಟರಲ್ಲೇ ಸಂತೋಷಪಟ್ಟೆವು. ಆ ಅರ್ಧ ದಿನವಾದರೂ ಸಿಕ್ಕಿದ ವಿರಾಮದಲ್ಲಿ ನೆಂಟರಿಷ್ಟರ ಮನೆಗೆ ಅಪರೂಪದ ಭೇಟಿ ಇತ್ತು, ಅವರ ಯೋಗಕ್ಷೇಮವನ್ನು ವಿಚಾರಿಸಿ, ನಮ್ಮ ಯೋಗಕ್ಷೇಮವನ್ನು ಅವರಿಗೆ ತಿಳಿಸಿ, ಇಷ್ಟರವರೆಗೆ ನನಗೆ ಅನಾಯಾಸವಾಗಿ ದೊರೆತಿದ್ದ "Unsociable fool" ಎಂಬ ಬಿರುದನ್ನು ಕಳಚಿಹಾಕಬಹುದಲ್ಲ – ಎಂದು ನಾನು ಅತ್ಯಾನಂದವನ್ನು ಹೊಂದಿದೆನು

ಆ ದಿನ ಆದಿತ್ಯವಾರ. ಬೆಳಿಗ್ಗೆ ಎದ್ದವನೇ ಮುಖ ತೊಳೆದು ಕಾಫಿಯ ಸೇವೆ ಸಲ್ಲಿಸುವಾಗ, ಸೀತೆಯೊಡನೆ ಹೇಳಿದೆ "ಇವತ್ತು ನಾನು ಕಾಸರಗೋಡಿಗೆ ಹೋಗಬೇಕಾಗಿದೆ."

"ಏನು ವಿಶೇಷದ ಕಾರ್ಯಭಾರ ಕಾಸರಗೋಡಿನಲ್ಲಿ ?" ಎಂದು ಸೀತೆಯ ಪ್ರಶ್ನೆ.

"ವಿಶೇಷ ಕಾರ್ಯವೇನೂ ಇಲ್ಲ, ಭಾರ ಅದರ ಮೊದಲೇ ಅಲ್ಲ. ಆದಿತ್ಯವಾರವಲ್ಲ ? ಮಧ್ಯಾಹ್ನದ ನಂತರ ಬಿಡುವಿದೆ ಮಧ್ಯಾಹ್ನ ೧೨–೩ಂಕ್ಕೆ ಕಾಸರಗೋಡಿಗೆ ಬಂಡಿಯೂ ಇದೆ ಹೋಗಿ ಭಾವಂದಿರನ್ನೂ, ತಂಗಿಯನ್ನೂ ನೋಡಿ, ಬರುವ ಯೋಚನೆ ಇದೆ" ಅಂದೆ.

ಅಷ್ಟು ಕೇಳಿದ್ದೇ ತಟಕ್ಕನೆ ಕಾಫಿಯ ಪಾತ್ರವನ್ನು ನೆಲಕ್ಕಿಟ್ಟು, ಸರಸರನೆ ಹೊರ ನಡೆದಳು ಸೀತಾ.

ಆಶ್ಚರ್ಯಚಕಿತನಾಗಿ, ನಾನು ಕೂತಲ್ಲೇ ಸ್ತಂಭಿತನಾದೆ!

ಮರುಕ್ಷಣದಲ್ಲಿ ಸೀತಾ ಸರ್ರನೆ ಒಳಕ್ಕೆ ಬಂದು, "ಹಾದೇನ್ರೀ ಇವತ್ತಿನ ಕಾಸರಗೋಡಿನ ಪ್ರೋಗ್ರಾಂ ಕೇನ್ಸಲ್" ಅಂದಳು "ನೀವು ಈ ದಿನ ಕಾಸರಗೋಡಿಗೆ ಹೋಗುವುದಿಲ್ಲ."

ಹೋಗುವುದಿಲ್ಲ, "ಪ್ರೋಗ್ರಾಂ" 'ಕೇನ್ಸಲ್!' ಮನಸ್ಸು ಮಾಡಿದೆನೆಂದರೆ, ಹಿಮಾಲಯದ ಶಿಖರವನ್ನೂ ಏರಿ, ತೇನ್‌ಸಿಂಗನನ್ನೂ ಹಿಂದಿಕ್ಕಬಲ್ಲೆ!

ಹೇಳಿದೆ. "ಸೀತಾ ನಾನು ಖಂಡಿತ ನಿರ್ಧಾರ ಮಾಡಿದ್ದೇನೆ. ಮಧ್ಯಾಹ್ನ ೧೨ ಗಂಟೆಗೆ ಆಫೀಸಿನ ಬಾಗಿಲು ಹಾಕಿ, ೧೨-೨೦ರ ಬಂಡಿಗೆ ಕಾಸರಗೋಡಿಗೆ ಹೋಗಿ, ತಂಗಿ ಭಾವಂದಿರ ಯಥಾ ಯೋಗ್ಯೋಪಚಾರಗಳನ್ನು ಸ್ವೀಕರಿಸಿ, ರಾತ್ರಿ ೯ ರ ಗಾಡಿಗೆ ವಾಪಸು ಮಂಗಳೂರಿಗೆ!"

ಕತ್ತನ್ನು ಉದ್ದವಾಗಿಸಿ, ಮುಖವನ್ನು ನನ್ನ ಮುಖದೆಡೆ ಚಾಚಿ, ಅಣಕವಾಡುತ್ತ, ಸೀತೆ ಹೇಳಿದಳು. "ಇವತ್ತು . ನೀವು ಕಾಸರಗೋಡಿಗೆ.... ಹೋಗುವುದಿಲ್ಲ!"

ಎಲಾ ಪೋರಿ!. "ಏಕೆ?" ಎಂದು ಪ್ರಶ್ನಿಸಿದೆ

ಸೀತೆಯೆಂದಳು "ಈ ವಾರದಲ್ಲಿ ನಿಮಗೆ ಪ್ರಯಾಣಸುಖ ಸಿಗಲಾರದು!"

ಪ್ರಯಾಣಸುಖ ಸಿಗಲಾರದು? "ಏನೇ ಇದೊಂದು ಹೊಸ ರೋಗ ಉದ್ಭವವಾಗಿದೆ ಇವತ್ತು?"

ಕೈಯಲ್ಲಿನ 'ಕರಾಳವಾಣಿ' ಪತ್ರಿಕೆಯನ್ನು ಬಿಡಿಸಿ, ಸೀತೆಯೆಂದಳು. "ನೋಡ್ರಿ ನಿಮ್ಮ ಈ ವಾರದ ಭವಿಷ್ಯ ನಿಮ್ಮ ಜನ್ಮ ನಕ್ಷತ್ರ ಧನಿಷ್ಠಾ, ರಾಶಿ ಕುಂಭ, ಕುಂಭರಾಶಿಯವರಿಗೆ ಈ ವಾರ ಪತ್ರಿಕೆಯಲ್ಲಿ ಜೋತಿಶ್ಯಾಸ್ತ್ರ ಪ್ರದೀಪ ಹೋರಾಶಾಸ್ತ್ರ ಪ್ರವೀಣ, ಶಂಕರಾನಂದ ಫಳನೀರಕಾರರು ಏನನ್ನುತ್ತಾರೆ ಗೊತ್ತೇ? –'ಎಲಾ ಕುಂಭ ರಾಶಿಯಲ್ಲಿ ಜನಿಸಿದ ಭಾಗ್ಯಹೀನರೇ, ಈ ವಾರದಲ್ಲಿ ಗೃಹ ಸುಖ ಸಿಗಲಾರದು ಸಾಲಗಾರರ ಉಪಟಳ ಹೆಚ್ಚಾಗಬಹುದು. ಗುರುವಿನ ವಕ್ರದೃಷ್ಟಿ ಲಾಭಸ್ಥಾನದ ಮೇಲೆ ಇದ್ದ ಪ್ರಯುಕ್ತ ಕೈಕೊಂಡ ಉದ್ಯಮಗಳಲ್ಲಿ ನಷ್ಟವಾಗಬಹುದು. ನೌಕರಿಯಲ್ಲಿ ವರ್ಗವಾಗುವ ಸಂಭವವಿದೆ. ರಾಹು ಕೇತುಗಳು ಒಂದೆಡೆಯಲ್ಲೇ ಜಮಾಯಿಸಿರುವುದರಿಂದ,

ಗೃಹದಲ್ಲಿ ಕಲಹವಾಗುವ ಸಂದರ್ಭವಿದೆ. ಅಲ್ಲದೆ ಎಲ್ಲಾದರೂ ಪ್ರಯಾಣ ಬೆಳೆಸುವ ಯೋಚನೆ ಇದ್ದರೆ, ಅದನ್ನು ಕಿತ್ತೊಗೆಯಿರಿ ನಿಮಗೆ ಈ ವಾರ ಪ್ರಯಾಣದ ಯೋಗವಿಲ್ಲ'" ಇಷ್ಟನ್ನೂ ಒಂದೇ ಸಮನೆ ಹೇಳಿ ಮುಗಿಸಿ ಪತ್ರಿಕೆಯನ್ನು ನನ್ನೆದುರು ಬಿಸುಟು, ಸೊಂಟದ ಮೇಲೆ ಕೈಯಿಟ್ಟು ನಿಂತು ಕೊಂಡಳು ಸೀತಾ.

ಕಷ್ಟಕ್ಕಿಟ್ಟುಕೊಂಡಿತಲ್ಲ! ವಾರಪತ್ರಿಕೆಯಲ್ಲಿನ ರಾಶಿ ಭವಿಷ್ಯ ಬರೆದವನು ನನಗೆ ಪ್ರಯಾಣ ಯೋಗವಿಲ್ಲವೆಂದು ಬರೆದ ಮಾತ್ರಕ್ಕೆ ನಾನು ನನ್ನ ಪ್ರಯಾಣಾ ತುರವನ್ನು ಕರುಬಬೇಕೇ? ಸಾಧ್ಯವಿಲ್ಲ ಹೇಳಿದೆ. "ಸೀತಾ, ನಾನು ಈ ದಿನ ಕಾಸರಗೋಡಿಗೆ ಹೋಗುವುದು ಖಂಡಿತ!"

"ಹಾಗಾದರೆ ಕರಾಳವಾಣಿಯ ಫಳನೀರಕಾರರ . ?"

"ಫಳನೀರಕಾರನೋ ಎಳನೀರಕಾರನೋ ಹಾಳಾಗಲಿ ಅವ ಅಂತೂ ನಾನು ಕಾಸರಗೋಡಿಗೆ ಹೋಗುವುದು ನಿಶ್ಚಯ!" ಅಂದೆ.

ನಿಟ್ಟುಸಿರಿಟ್ಟು, "ನಿಮ್ಮಿಚ್ಛೆ!" ಎಂದಳು ಸೀತಾ

ಕಾಫಿ ಮುಗಿಸಿ ಆಫೀಸಿಗೆ ಹೋದೆ. ಬಂದ ರೋಗಿಗಳಿಗೆ ಅವಸರದಲ್ಲೇ ಮದ್ದು ತಯಾರಿಸಿ ಕೊಟ್ಟೆ. ಆಫೀಸಿನ ಜವಾನನಿಗೆ ಹನ್ನೊಂದೂವರೆ ಗಂಟೆಗೇನೇ ಬಾಗಿಲು ಮುಚ್ಚುವಂತೆ ತಿಳಿಸಿದೆ. ಗಂಟೆ ಹನ್ನೊಂದೂವರೆಯಾಗಲು ಆಫೀಸಿನ ಬಾಗಿಲಿಗೆ ಬೀಗ ತಗುಲಿಸಿ, "ಇವತ್ತು ರವಿವಾರ ಮಧ್ಯಾಹ್ನದ ನಂತರ ಆಸ್ಪತ್ರೆ ತೆರೆಯೋದಿಲ್ಲ ದಯವಿಟ್ಟು ನಾಳೆ ಬೆಳಿಗ್ಗೆ ಒಂಬತ್ತು ಗಂಟೆಗೆ ಬನ್ನಿ." ಎಂದು ಬರೆದಿದ್ದ ಒಂದು ತೂಗು ಹಲಗೆಯನ್ನು ಹೊರಬಾಗಿಲಿಗೆ ನೇಲಿಸಿ, ಮಾರ್ಗಕ್ಕಿಳಿದೆ

ರಸ್ತೆಯ ಬೀದಿಯಲ್ಲಿ ಅರ್ಧಗಂಟೆ ಕಾದರೂ, ಸಿಟಿಬಸ್ಸಿನ ಆಗಮನವೇ ಇಲ್ಲ. ಮನವಾರೆ ಅದನ್ನು ಶಪಿಸುತ್ತಾ, ಆ ಮಧ್ಯಾಹ್ನದ ಉರಿಬಿಸಿಲಲ್ಲೇ ರೈಲ್ವೆ ಸ್ಟೇಶನಿನತ್ತ ಧಾವಿಸಿದೆ – ಎರಡು ಮೈಲು! ಸ್ಪರ್ಧೆಗೆ ನಿಂತಿದ್ದರೆ, ಓಟದಲ್ಲಿ ಪ್ರಥಮ ಬಹುಮಾನವು ನನಗೇನೇ ಸಿಗಬೇಕಾಗಿತ್ತು. ವಾಯುವೇಗ ಅಂತಾರಲ್ಲ, ಆ ವೇಗದಲ್ಲಿ ಹೊರಟೆ ಅಷ್ಟಾದರೂ ಉಸ್ಸಪ್ಪ. ರೈಲು ನನ್ನನ್ನು ಬಿಟ್ಟೇ ಕಾಸರಗೋಡಿಗೆ ಪ್ರಯಾಣ ಬೆಳೆಸಬೇಕೇ?

ಬಾಗಿಲು ತೆರೆದು ಒಳಹೊಕ್ಕೆ ಸೀತಾ ಚಾವಡಿಯಲ್ಲೆಲ್ಲೂ ಕಾಣಿಸಲಿಲ್ಲ. ಉಡುಪನ್ನು ಬದಲಾಯಿಸಿ, ಕೈಕಾಲು ತೊಳೆದು ಅಡಿಗೆ ಕೋಣೆಯನ್ನು ಪ್ರವೇಶಿಸಿದೆ.

"ಬನ್ನಿ, ಕುಳ್ಳಿರಿ." ಅಂದಳು ಸೀತಾ

ಎರಡು ಬಟ್ಟಲುಗಳನ್ನು ಇಟ್ಟು, ಬಡಿಸಿ, ಸಿದ್ಧಗೊಳಿಸಿ ನಿಂತಿದ್ದಾಳೆ!

ಆಶ್ಚರ್ಯದಿಂದ ಕೇಳಿದೆ "ಹೌದೇನೇ – ನಾನು ಇವತ್ತು ಕಾಸರಗೋಡಿಗೆ ಹೋಗುತ್ತೇನೆಂದಿದ್ದೆ – ಮಧ್ಯಾಹ್ನದ ಊಟ ಅಲ್ಲೇ ತೀರಿಸುತ್ತೇನೆಂದಿದ್ದೆನಲ್ಲ! ಮತ್ತೇಕೆ ಈ ಎರಡು ಬಟ್ಟಲುಗಳು?"

"ನಿಮಗೊಂದು ನನಗೊಂದು! ಬಡಿಸಿ, ಸಿದ್ಧವಾಗಿಟ್ಟಿದ್ದೇನೆ. ಕುಳಿತು ಊಟಮಾಡಿ" ಅಂದಳು

ಮಣೆಯ ಮೇಲೆ ಕುಳಿತುಕೊಂಡು, "ಅಲ್ಲ, ನಾನು ಕಾಸರಗೋಡಿಗೆ ಹೋಗಿದ್ದರೆ?"

"ಫಳನೀರಕಾರರ ಭವಿಷ್ಯದ ಮೇಲೆ ನನಗೆ ದೃಢ ವಿಶ್ವಾಸ ಇದೆ" ಎಂದಳು ಸೀತಾ.

ದಂಗಾದೆ!

× × × ×

ಮಧ್ಯಾಹ್ನ ಆಫೀಸಿನಲ್ಲಿ ಕೆಲಸ ಜಾಸ್ತಿ ಇತ್ತು ಮಾಡಿ ಮುಗಿಸಿ, ಆಫೀಸಿನ ಬಾಗಿಲು ಹಾಕಿ, ಸೈಕಲ್ ಹತ್ತಿ ಮನೆಗೆ ಮುಟ್ಟುವಾಗ ಗಂಟೆ ಎರಡು ಮೀರಿತ್ತು. ಹೊಟ್ಟೆಯಲ್ಲಿ ಕಾಗೆಗಳ ತಾಂಡವ ಜರುಗುತ್ತಿತ್ತು. ಸೀತೆಯ ನಳಪಾಕದಿಂದ ಹೊಟ್ಟೆಯಲ್ಲಿನ ವೈಶ್ವಾನರವನ್ನು ತಣಿಸೋಣಾಂತ ಮನೆ ಸೇರಿದರೆ

"ಸ್ವಲ್ಪ ತಾಳಿ ಈಗ ಬಂದೆ" ಅಂದಳು ಸೀತಾ.

"ಏನೆ ಸೀತಾ! ನಿನ್ನಪ್ಪನಿಗೆ ಪತ್ರ ನಂತರ ಬರೆಯಬಹುದು ಮೊದಲು ನನಗೊಂದಿಷ್ಟು ಅನ್ನವೋ ಗಂಜಿಯೋ ಹಾಕು ಹೊಟ್ಟೆ ಬೆನ್ನಿಗಂಟಿದೆ" ಅಂದೆ. ಮೇಜಿನೆಡೆ ಬರೆಯಲು ಕೂತಿದ್ದ ಸೀತಾ ಅಲುಗಲಿಲ್ಲ.

ಅಲ್ಲ, ಈ ಹೆಂಗುಸರ ಹಣೆಬರಹವೇ ಹೀಗೇನೋ? ಅಲ್ಲ, ನನ್ನ ಸೀತೆಗೆ ಮಾತ್ರ ಇಂತಹ ಬುದ್ಧಿ ಕೊಟ್ಟಿದಾನೆಯೋ ಬ್ರಹ್ಮ? ಹಸಿವೆಯಿಂದ

ಕಂಗಾಲಾಗಿದ್ದೇನೆ ಉಣಬಡಿಸು ಅಂದರೆ ಕೈಯಲ್ಲಿ ಪೇನಾ ಹಿಡಿದು, ಅಂತರಿಕ್ಷದೆಡೆ ದೃಷ್ಟಿಯಿಟ್ಟು, ಕಾರ್ಕಳದಲ್ಲಿನ ಗೋಮಟೇಶ್ವರನ ಮೂರ್ತಿಯಂತೆ ಕೂತಿದ್ದಾಳಲ್ಲ! ಗಂಡನ ಪ್ರಾಣವು ಹೊಟ್ಟೆಯೊಳಗಿನ ಹಸಿವೆಯಿಂದ ಉರಿದು ಭಸ್ಮವಾದರೂ, ಈ "ಪತ್ನಿ" ಎಂಬ ವಸ್ತುವಿಗೆ ಅದರ ಗೊಡವೆಯೆ ಇಲ್ಲವಲ್ಲ! ಇಷ್ಟಿದ್ದರೂ ಈ ಹಿಡಿಂಬೆ ಜಾತಿಯ ಸ್ತ್ರೀಯರನ್ನು ಕೊರಳಿಗೆ ಕಟ್ಟಿಕೊಳ್ಳಲು, ನಾಮುಂದು – ನಾಮುಂದು ಎಂದು ಈ ಪುರುಷ ಪ್ರಾಣಿಗಳು ಗೋಣುನೀಡುತ್ತಿರುವರಲ್ಲ!

ಹೊಟ್ಟೆಯೊಳಗಿನ ಹಸಿವು ಕ್ರೋಧವಾಗಿ ಮಾರ್ಪಟ್ಟು, ನೆತ್ತಿಯನ್ನೇರಿತು. ಇದಕ್ಕಿಂತ ಕ್ಷುಲ್ಲಕ ಕಾರಣಕ್ಕಾಗಿ ವಿವಾಹ ವಿಚ್ಛೇದನ ಮಾಡಿಕೊಂಡವರೆಷ್ಟಿಲ್ಲ? ಹಸಿವೆಯಾದಾಗ ಉಣಬಡಿಸಲೆಂದೇ ಈ ತಾಟಕೆಯನ್ನ ಮದುವೆಯಾದೆನಲ್ಲದೆ, ಕುರ್ಚಿಯ ಮೇಲೆ ಕುಳ್ಳಿರಿಸಿ, ಪೇನಾ ಕೈಗೆ ಕೊಟ್ಟು, ಮನೆಯ ಮಾಡಿನ ಹಂಚುಗಳನ್ನೆಣಿಸುತ್ತಿರುವಾಗ್ಯೆ ಆಕೆಯ ಪಾದಪೂಜೆ ಮಾಡಲೆಂಬ ಆಸೆಯಿಂದ ಆಕೆಯ ಕೊರಳಿಗೆ ಮಾಂಗಲ್ಯಸೂತ್ರ ಕಟ್ಟಿದೆನೇ? ಹಾಳಾಗ ಸ್ತ್ರೀಯರ ಜಾತಿ!

" ಸೀತಾsssss!" ಎಂದು ಅರಚಿದೆ

ನನ್ನ ಸ್ವರ ಅಂದರೆ ಗಾರ್ಧಭ ಗಾಯನದಲ್ಲಿನ ತಾರಸ್ವರ! ಆವೇಶ ಬಂತೂಂದ್ರೆ ದಕ್ಷಿಣಾಧಿವ್ಯಾಧಿ ಹಿಡಿದವರ ಗಾಯನದಂತೆ. ಆರಂಭದಲ್ಲಿ ಎಮ್ಮೆ ಕರುವಿನೋಪಾದಿಯಲ್ಲಿ ಪ್ರಾರಂಭವಾಗಿ, ಅಂತ್ಯದಲ್ಲಿ ಕಪ್ಪೆಯ ಶಾರೀರವನ್ನು ಹೊಂದುತ್ತಿದೆ ಈಗ ಕೋಪಾವೇಶಗಳು ಒಟ್ಟುಗೂಡಿ ಹೊರಟ ಸ್ವರವೆಂದರೆ... ಹೇಳಲಾರೆ, ನಾನು ಹೇಳಿದರೂ ನೀವು ಕೇಳಲಾರಿರಿ ಅಂತೂ ಸೀತೆಯ ಸಮಾಧಿ ಭಂಗವಾಯಿತು.

" ಶ್ ಶ್ ಶ್ ಶ್ ಶೂ!" ಅಂದಳು ಸೀತಾ.

" ಕನ್ನಡಿಗರ ಕರ್ಮಕಥೆ" ಎಂಬ ಗ್ರಂಥವನ್ನು ಯಾರೋ ಬರೆದಿರುವರೆಂದು ತೋರುತ್ತಿದೆ ಕನ್ನಡನಾಡಿನಲ್ಲಿ ಅನೇಕ ಉದ್ದಾಮ ಪ್ರಚಂಡ ಕಾದಂಬರಿಕಾರರು ಇದ್ದಾರೆ. ಅವರಲ್ಲಿ ಯಾರಾದರೂ " ಗಂಡನ ಕರ್ಮಕಥೆ" ಯನ್ನು ಬರೆಯುವ ಸಾಹಸ ಮಾಡುವವರಾದರೆ, ಅದರ ಕಥಾವಸ್ತು – ಪ್ರಸಂಗ -

ಸಾಕ್ಷಿ – ಸಬೂತು – ಇವುಗಳನ್ನೆಲ್ಲಾ ಧರ್ಮಾರ್ಥವಾಗಿ ನಾನೇ ಒದಗಿಸಿ ಕೊಡುವೆನೆಂದು ಈ ಮೂಲಕ ಸರ್ವರಿಗೂ ತಿಳಿಯಪಡಿಸುತ್ತೇನೆ!

"ಏನೇ ಅದು ಶ್ ಶ್ ಶ್ ಶ್ ಶೂ?" ಅಂತ ಪ್ರಶ್ನಿಸಿದೆ

"ಒಂದೈದು ನಿಮಿಷ ತಾಳ್ಮೆಯಲ್ಲಿರರಿ. ನಾನೊಂದು ಮಹಾ ಮಹತ್ಕಾರ್ಯದಲ್ಲಿದ್ದೇನೆ. ಹತ್ತು ಸಾವಿರ ರೂಪಾಯಿಗಳು!"

ಅಪಸ್ಮಾರ ಹಿಡಿದವರಂತೆ ಸೀತೆಯ ಕೈಯಲ್ಲಿನ ಲೇಖನಿ ಸೆಟ್ಟಗಾಯಿತು, ದೃಷ್ಟಿ ಊರ್ಧ್ವವಾಯಿತು, ಇಡೀ ದೇಹ ನಿಶ್ಚಲ!

ಮಹಾಮಹತ್ ಕಾರ್ಯ, ಸೀತೆಯ ಅಚ್ಚ ಕನ್ನಡವೆಂದರೆ ಹಾಗೆ! "ಡಬ್ಬಲ್" ಮಹತ್ಕಾರ್ಯ? ಹತ್ತು ಸಾವಿರ ರೂಪಾಯಿಗಳು?.. ಹತ್ತು ಸಾವಿರ ರೂಪಾಯಿಗಳೆಂಬ ಆ ಶಬ್ದ ಕೇಳುತ್ತಲೇ ಹೊಟ್ಟೆಯೊಳಗಿನ ಹಸಿವು ಇಂಗಿಹೋಯಿತು.

ಸೀತೆಯ ಅಪ್ಪ ಯೆಂದರೆ ಬಲು ದೊಡ್ಡ ಆಸ್ತಿವಂತರು. ಸೀತೆಯ ವಿವಾಹ ಕಾಲದಲ್ಲಿ ಕನ್ಯಾದಾನದ ವರದಕ್ಷಿಣೆಯೆಂದು ಒಂದೇ ಒಂದು ಚಿಕ್ಕಾಸನ್ನು ಬಿಚ್ಚ ದಿದ್ದರೂ, ಸೀತೆ ಅವರ ಏಕಮಾತ್ರ ಪುತ್ರಿ ಅಂದಮೇಲೆ ಸೀತೆಗೆ ಅವರ ಹತ್ತು ಸಾವಿರ ರೂಪಾಯಿಗಳ ಹಕ್ಕು ಇದ್ದದ್ದೇ! ನನ್ನ ಹೊಟ್ಟೆಯೆಂದರೆ ಸದಾ ವೈಶ್ವಾನರನ ನರ್ತನ ಶಾಲೆ! ಎಷ್ಟು ತಿಂದರೂ ಮುಗಿಯದ ಹಸಿವು ನನ್ನದು. ಒಂದೈದು ನಿಮಿಷ ತಡೆದರೆ, ಏನಾದರೂ ನನ್ನ ಪ್ರಾಣ ಹೋಗಬಹುದೇ? ಛೇ ಹಸಿವೆಯಿಂದ ಪ್ರಾಣ ಹೋಗುವುದು ಕಮ್ಯುನಿಸ್ಟರ ಭಾಷಣದಲ್ಲಿ ಮಾತ್ರ!

ಮೆಲ್ಲನೆ ಸೀತೆಯತ್ತ ಸರಿದೆ "ಚೆನ್ನಾಗಿ ಬರೆ ನಿನ್ನಪ್ಪನಿಗೆ ಕಾಗದ. ಹೊಟ್ಟೆಗೆ ಹಿಟ್ಟಿಲ್ಲ, ತಲೆಗೆ ಜುಟ್ಟಿಲ್ಲ, ಮೈಗೆ ಬಟ್ಟೆ ಇಲ್ಲ, ಮಕ್ಕಳ ಶಾಲೆಯ ಸಂಬಳಕ್ಕೆ ಕಾಸಿಲ್ಲ ಅವರು ಹಗಲು ರಾತ್ರ ದುಡಿದುದು ಎಷ್ಟಕ್ಕೂ ಸಾಕಾಗು ವುದಿಲ್ಲ. ಕೂಡಲೇ ಹತ್ತು ಸಾವಿರ ರೂಪಾಯಿ ಕಳುಹಿಸಿ – ಎಂದು ಬರೆ" ಎಂದೆ.

ಇಷ್ಟು ಹೇಳುವಾಗ್ಯೆ ಮಾತನಾಡುತ್ತ ಸೀತೆಯ ಸನಿಯಕ್ಕೆ ಮುಟ್ಟಿದೆ. ಭಾವದ ಬರೋಣಕ್ಕಾಗಿ ಲೇಖನಿಯನ್ನು ತಲೆಗೆ ಚುಚ್ಚಿ, ಕೂದಲು ಅಸ್ತವ್ಯಸ್ತ ವಾಗಿತು. ಮೆಲನೆ ಅದನು ಸರಿಪಡಿಸಿದೆ ಸೀತಾ ಅಂದರೆ ಎಂತಹ ಸೀ

ರತ್ನ ! ಒಂದು ದಿನವಾದರೂ ನನ್ನನ್ನು ಪೀಡಿಸಿದವಳಲ್ಲ ! ಎಂತಹ ಮೃದು ಹೃದಯ ! ಬೆಣ್ಣೆಗಿಂತ ಮೆದು ! ಇಷ್ಟನ್ನು ಯೋಚಿಸುತ್ತಿರುವಾಗಲೇ ನನ್ನ ದೃಷ್ಟಿ ಮೇಜಿನ ಮೇಲೆ – ಸೀತೆಯ ಎದುರಿದ್ದ ಕಾಗದದ ಮೇಲೆ ಬಿದ್ದಿತು !!

ಹೊಟ್ಟೆಯಲ್ಲಿನ ವೈಶ್ವಾನರನು ಭುಗಿಲ್ಲೆಂದು ಉರಿದ ! ಹಸಿವೆಯು ಮೊದಲಿಗಿಂತ ಇಮ್ಮಡಿ – ಹತ್ತುಮಡಿಯಾಯಿತು !! ನೆತ್ತಿಯನ್ನೇರಿದ್ದ ಕ್ರೋಧವು ನೂರ್ಮಡಿಯಾಯಿತು !!

ಸೀತೆಯು "ಕರಾಳವಾಣಿ" ಪತ್ರಿಕೆಯಲ್ಲಿನ ಚಕ್ರಬಂಧ ಒಗಟನ್ನು ಬಿಡಿಸುತ್ತಿದ್ದಾಳೆ !

ಕ್ರೋಧದಿಂದ "ಏನೇ ಇದು ಕ್ರಾಸ್‌ವರ್ಡ್ ಹುಚ್ಚು ?" ಎಂದು ಪ್ರಶ್ನಿಸಿದೆ.

ಸೀತೆಯೆಂದಳು "ಇಲ್ನೋಡ್ರಿ, ಈ ಒಗಟನ್ನು ಸರಿಯಾಗಿ ಬಿಡಿಸಿ, ಕಳುಹಿಸಿದರೆ, ಪ್ರಥಮ ಬಹುಮಾನ ಹತ್ತು ಸಾವಿರ ರೂಪಾಯಿ !"

ವಿಕಟವಾಗಿ ನಕ್ಕೆ ಹೇಗೆಂದು ಪ್ರಶ್ನಿಸಿದರೆ ನನಗೆ ತಿಳಿಯದು. ಅಂತೂ ನಾನು ನಕ್ಕುದೇ ವಿಕಟವಾಗಿ ಅಂತ ನನ್ನ ಭಾವನೆ ಅಂತೂ ನಕ್ಕು ಹೇಳಿದೆ. "ಇಂದಿನ ತನಕ ಯಾರಿಗೂ ಚಕ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಸಿಕ್ಕಿದ್ದು ನನ್ನ ತಿಳುವಳಿಕೆಗೆ ಬಂದಿಲ್ಲ !" ಅಂದೆ

ಸೀತೆಯು ನಿಶ್ಚಿತ ಸ್ವರದಲ್ಲಿ–ಇದು ಒಂದು ನನಗೆ ತಿಳಿಯದ ಅಪಸ್ವರ ! ನಿಶ್ಚಿತ ಸ್ವರ ಹೇಗಿರುತ್ತದೆಂದರೆ ನಾನರಿಯೆ ಆದರೂ ಎಲ್ಲಾ ಕತೆಗಾರರೂ ಈ ರೀತಿ ಬರೆಯುತ್ತಾರೆ. ಕಾದಂಬರಿಗಳಲ್ಲಂತೂ ಪುಟಕ್ಕೊಂದು ಈ ಶಬ್ದವಿಲ್ಲದಿದ್ದರೆ, ಅದು ಕಾದಂಬರಿಯೆನಿಸುವುದಿಲ್ಲ–ಅದೇ ನಿಶ್ಚಿತ ಸ್ವರದಿಂದ ಸೀತೆ ಹೇಳಿದಳು. "ಈ ಸಲ ಖಂಡಿತವಾಗಿಯೂ ನನಗೇನೇ ಪ್ರಥಮ ಬಹುಮಾನ ಈ ಚಕ್ರಬಂಧ ಸ್ಪರ್ಧೆಯಲ್ಲಿ !"

ಎಲಾ ಇವಳ ! ಆ "ಕರಾಳವಾಣಿ"ಯ ಸಂಪಾದಕನೇನು ಇವಳ ಅಪ್ಪನೇ ? ಅಲ್ಲ, ಮಾವನೇ ? ಕುತೂಹಲದಿಂದ "ಅದು ಹೇಗೆ ?" ಅಂದೆ.

"ಕರಾಳವಾಣಿ"ಯ ಪುಟ ಮಗುಚಿ, ತೋರಿಸಿದಳು ಸೀತಾ. ಏನನ್ನು ? ಘಳನೀರಕಾರನ ರಾಶಿಭವಿಷ್ಯವನ್ನು !!

ಸೀತೆಯ ಜನ್ಮ ನಕ್ಷತ್ರ, ಸ್ವಾತಿ – ಜನ್ಮರಾಶಿ ತುಲಾ ! ಘಳನೀರಕಾರನು

ಹೋರಾಶಾಸ್ತ್ರವನ್ನೆಲ್ಲಾ ಬುಡಮೇಲು ಮಾಡಿ, ಜ್ಯೋತಿಶ್ಶಾಸ್ತ್ರವನ್ನು ಮಥನ ಮಾಡಿ, ತುಲಾ ರಾಶಿಯವರಿಗೆ ಅಭಯ ಕೊಟ್ಟಿದ್ದಾನೆ – " ನಿಮಗೆ ಈ ವಾರ ಲಾಟರಿ ಸ್ಪರ್ಧೆ ಇತ್ಯಾದಿಗಳಲ್ಲಿ ಬಹುಮಾನ ಸಿಗುವುದು ಖಂಡಿತ !!"

ಮರುದಿನ ಬೆಳಗ್ಗೆ ಸೀತಾ ಕೇಳಿದಳು " ಹೌದೇನ್ರಿ, ' ಸು ' ಎಂಬ ಅಕ್ಷರದಿಂದ ಆರಂಭವಾಗಿ ಮೂರೇ ಅಕ್ಷರಗಳುಳ್ಳ ಒಂದು ಸ್ತ್ರೀಯ ಹೆಸರು ಹೇಳಿ ನೋಡೋಣ."

ಗ್ರಹಚಾರವಾಯಿತಲ್ಲ ! ' ಸು ' ಎಂಬ ಅಕ್ಷರದಿಂದ ಆರಂಭವಾಗುವ ಹೆಸರು ಬಿಡಿ, ಸೀತೆ ಎಂಬ ಶಬ್ದವನ್ನುಳಿದು, ಯಾವ ಅಕ್ಷರದಿಂದ ಆರಂಭ ವಾಗುವ ಸ್ತ್ರೀಯರ ಯಾವ ಹೆಸರನ್ನು ಜ್ಞಾಪಿಸಿಕೊಂಡರೂ ಉರಿದೇಳುವ ಸ್ವಭಾವ ಸೀತೆಯದು ! ಹೇಗಿದ್ದರೂ ಹತ್ತು ಸಾವಿರದ ಗಂಟಲ್ಲವೇ ? ತಲೆ ತುರಿಸುತ್ತಾ ಯಾದಿಯೊಂದನ್ನು ಸೀತೆಯ ಮುಂದಿಟ್ಟೆ " ಸುನೀತಾ, ಸುವ್ರತಾ, ಸುಚೇತಾ, ಸುನಂದಾ ಯಾನೆ ಸುಗಂಧಿ, ಸುಶೀಲಾ, ಸುಪ್ರೀತಾ, ಸುಚಿರಾ. . .

" ಮುಗಿಯಿತೇ ?" ಎಂದು ಪ್ರಶ್ನೆ.

" ಏಕೆ ಇಷ್ಟು ಸಾಕಾಗದೆ ?"

" ಅಲ್ಲ, ನಾನೂ ಒಂದು ಇಪ್ಪತ್ತು ಹೆಸರುಗಳನ್ನು ಬರೆದಿಟ್ಟಿದ್ದೇನೆ. ನಿಮ್ಮ ಈ ಎಂಟು ಹೆಸರುಗಳು. ಜುಮ್ಲಾ ಇಪ್ಪತ್ತೆಂಟು ! ಈ ಇಪ್ಪತ್ತೆಂಟು ಹೆಸರುಗಳನ್ನು ಕಳುಹಿಸುತ್ತೇನೆ."

" ಚಕ್ರಬಂಧ ಸ್ಪರ್ಧೆಯ ಪ್ರವೇಶ ಧನ ?" ಎಂದು ಕೇಳಿದೆ ಕುತೂಹಲ ದಿಂದ.

" ಒಂದೊಂದು ಉತ್ತರಕ್ಕೆ ಒಂದೊಂದು ರೂಪಾಯಿ !"

" ಅಲ್ಲ, ಇಷ್ಟೊಂದು ಉತ್ತರಗಳನ್ನು ಕಳುಹಿಸಲು ಹಣ ನಿನ್ನಪ್ಪ ಕಳಿಸುತ್ತಾನೆಯೋ ?" ಎಂದು ಕೇಳಿದೆ.

" ಅಲ್ರೀ, ಕಟ್ಟಿಗೆಯ ಆದಮ್ ಸಾಬನಿಗೂ ಬೈಹುಲ್ಲಿನ ಇಮಾಮ್ ಸಾಬನಿಗೂ ಜೀನಸಿನ ಅಂಗಡಿಯ ನಾಗೇಶ ಶೇಣ್ಯೆ ಇವರಿಗೂ ಹಣ ಕೊಟ್ಟಿಲ್ಲ. ಎಲ್ಲವನ್ನೂ ಸೇರಿಸಿ, ಈ ಚಕ್ರಬಂಧ ಸ್ಪರ್ಧೆಗೆ ಕಳುಹಿಸುತ್ತೇನೆ."

"ಸ್ತ್ರೀ ಬುದ್ಧಿ ಪ್ರಳಯಾಂತಕಾ" ಅಂತ ಮುಂಚಿನವರು ಹೇಳಿದ್ದು ಸುಳ್ಳಲ್ಲವೆಂದು ಕಾಣುತ್ತದೆ

ಕೇಳಿದೆ. "ಅಲ್ಲ, ಇಷ್ಟೆಲ್ಲಾ ಮಾಡಿ, ಆದಮ್ ಇಮಾಮ್ ಇತ್ಯಾದಿ ಇತ್ಯಾದಿ ಮಹಾಶಯರಿಗೆ ಏನೆಂದು ಸಮಾಧಾನಪಡಿಸಿದೆ?"

"ಬರುವ ತಿಂಗಳು ಒಂದನೇ ತಾರೀಖಿನ ದಿನ ಬೆಳಿಗ್ಗೆ ಬರುವಂತೆಯೂ ಆ ದಿನ ಅವರ ಲೆಕ್ಕ ಪೂರ್ತಾ ಚುಕ್ತಾ ಮಾಡುವಂತೆಯೂ ತಿಳಿಸಿದ್ದೇನೆ."

"ಏನದು ಒಂದನೇ ತಾರೀಖು?"

"ಆ ದಿನಕ್ಕೆ ಈ ಚಕ್ರಬಂಧ ಸ್ಪರ್ಧೆಯ ಬಾಬ್ತು ಹತ್ತುಸಾವಿರ ರೂಪಾಯಿಗಳ ಚೆಕ್ ಬಂದೇ ಬರುತ್ತದೆ!"

ಎಂತಹ ದುರಾಲೋಚನೆ, ಅಲ್ಲ ತಪ್ಪಿದೆ, ದೂ ರಾ ಲೋ ಚ ನೆ ಸೀತೆಯದು?

ತಿಂಗಳ ಕೊನೆಯ ದಿನ

ಸೀತೆಯ ಉತ್ಸಾಹದಲ್ಲಿ ರಾತ್ರೆಯ ಊಟಕ್ಕೆ ಸೊನ್ನೆ!

ರಾತ್ರೆಯಾದರೂ ನಿದ್ದೆ ಇದೆಯೆ? ತಲೆಯಲ್ಲಿ ಸುತ್ತುವ ಹತ್ತು ಸಾವಿರ ರೂಪಾಯಿಗಳ ಗಂಟಿನ ಮಹಿಮೆ! ರಾತ್ರೆ ಇಡೀ ಹಾಸಿಗೆಯಲ್ಲಿ ಹೊರಳಾಡಿ, ಹೊರಳಾಡಿ, ಬೆಳಗಿನ ಜಾವಕ್ಕೆ ಸ್ವಲ್ಪ ಜೊಂಪು ಹತ್ತಿತು

ಕಣ್ಣು ಬಿಡುವಾಗ್ಯೆ ಗಂಟೆ ಏಳು!

ಎದ್ದು ಹೊರಬರುವಾಗ್ಯೆ ಚಾವಡಿಯಲ್ಲಿ ಅತಿಥಿಗಳು – ಕಟ್ಟಿಗೆಯ ಆದಮ್‌ಸಾಬ, ಬೈಹುಲ್ಲಿನ ಇಮಾಮ್‌ಸಾಬ, ಜೀನಸಿನ ಅಂಗಡಿಯ ಬಿಲ್ ಕಲೆಕ್ಟರ್, ಬಟ್ಟೆಯ ಮಳಿಗೆಯ ಸೋಮಪ್ಪ ಪೂಜಾರಿ!

ಮುಖಮಾರ್ಜನ ತೀರಿಸಿದೆ.

ಕೋಣೆಯಲ್ಲಿ ಗುಟ್ಟಾಗಿಯೇ ಮೆಲ್ಲನೆ ಕಾಫಿಯನ್ನು ತೀರಿಸಿ, ನಾನೂ ಸೀತಾ ಚಾವಡಿಗೆ ಬಂದೆವು

ಅತಿಥಿಗಳೊಡನೆ ಕೇಳಿದೆ. "ಎಷ್ಟಿದೆ ನಿಮ್ಮದು ಜುಮ್ಲಾ ಬಾಕಿ?" ಎಂದು.

"ನಾಲ್ವತ್ತಾರು ರೂಪಾಯಿ ಹತ್ತಾಣೆ!" ಬೈಹುಲ್ಲಿನ ಬೆಲೆ.

"ಅರುವತ್ತೆರಡು ರೂಪಾಯಿ ಒಂಬತ್ತಾಣೆ!" ಕಟ್ಟಿಗೆ ಆದಮ ಸಾಬ.

"ಎಪ್ಪತ್ತೆಂಟು ರೂಪಾಯಿ ಮೂರು ಆಣೆ ಆರು ಪೈ!" ಜವಳಿಯ ಮಳಿಗೆಯ ಲೆಕ್ಕಾಚಾರ!

"ಮುನ್ನೂರ ಹದಿನಾಲ್ಕು ರೂಪಾಯಿ, ಹದಿನೈದು ಆಣೆ, ಹನ್ನೊಂದು ಪೈ!" ಜೀನಸಿನಂಗಡಿಯ ಬಿಲ್ ಕಲೆಕ್ಟರ್!

"ಈಗಿನ ಪೋಸ್ಟಿನಲ್ಲಿ ಚೆಕ್ ಬರುತ್ತದೆ. ಕೂಡಲೇ ನಿಮ್ಮ ಲೆಕ್ಕ ಚುಕ್ತಾ!" ಅಂದಳು ಸೀತಾ.

ಗಡಿಯಾರದಲ್ಲಿ ಗಂಟೆ ಎಂಟು ಹೊಡೆಯುವಾಗ ಪೋಸ್ಟ್ ಪ್ಯಾದೆಯ ಆಗಮನವಾಯಿತು. ಬಂದವನೇ "ರಿಜಿಸ್ಟರ್ ಕಾಗದ ಇದೆ" ಅಂದ

"ರಿಜಿಸ್ಟರ್ ಕಾಗದ?" ಅಂದೆ ಆಶ್ಚರ್ಯದಿಂದ.

"ಮತ್ತೇನು? ಹತ್ತು ಸಾವಿರ ಚೆಕ್ಕನ್ನು ಖಾಲಿ ಪತ್ರದಂತೆ ಕಳುಹಿಸುತ್ತಾರೆಯೇ?" ಅಂದಳು ಸೀತಾ

ಹೌದು: ಕವರಿನ ಮೇಲ್ಗಡೆಯೇ ಬರೆದಿದೆ – "ಕರಾಳವಾಣಿ" ಆಫೀಸಿನಿಂದ – ಎಂದು

ಹತ್ತು ಸಾವಿರ ರೂಪಾಯಿಗಳು! ನೂರು ರೂಪಾಯಿಗಳನ್ನು ಒಮ್ಮೆಗೆ ನೋಡದ ನಮಗೆ ಒಂದೇ ಗಂಟೆನಲ್ಲಿ – ಏಕಕಾಲದಲ್ಲಿ ಹತ್ತು ಸಾವಿರ ರೂಪಾಯಿಗಳು!

ಸೀತಾ ಕಾಗದ ಬಿಡಿಸಿ ಓದುತ್ತಿದ್ದಳು. ಓದುತ್ತಿದ್ದಂತೆ ಮುಖ ವಿವರ್ಣವಾಯಿತು.

"ಏನೇ ಸುದ್ದಿ?" ಅಂದೆ.

ಸೀತೆ ಪತ್ರವನ್ನು ನನ್ನ ಕೈಗಿತ್ತಳು. ಬಿಡಿಸಿ ಓದಿದೆ. ಅದರಲ್ಲಿ—

"ಕರಾಳವಾಣಿ" ಕಾರ್ಯಾಲಯ.

ತಾ. ೨೦–೫–೫೨

ಶ್ರೀಮತಿ ಸೀತಾದೇವಿಯವರಲ್ಲಿ.

ಅನಂತ ವಂದನೆಗಳು.

ನಮ್ಮ ಚಕ್ರಬಂಧ ಸ್ಪರ್ಧೆಯಲ್ಲಿ ಮೂರು ತಪ್ಪಿನ ಉತ್ತರಗಳನ್ನು ಕಳಿಸಿದವರು ಒಂದು ಸಾವಿರದ ಎಂಟನೂರ ಮೂವತ್ತನಾಲ್ಕು ಜನರು. ಅವರಲ್ಲಿ

ನೀವೂ ಒಬ್ಬರೆಂದು ತಿಳಿಸಲು ಬಹಳ ಆನಂದವಾಗುತ್ತದೆ. ಪ್ರಥಮ, ದ್ವಿತೀಯ, ತೃತೀಯ ಬಹುಮಾನದ ವಿವರಗಳು "ಕರಾಳವಾಣಿಯ" ಈ ವಾರದ ಸಂಚಿಕೆಯಲ್ಲಿ ಪ್ರಕಟವಾಗಿವೆ ಚತುರ್ಥ ಬಹುಮಾನದ ಜುಮ್ಲಾ ಮೌಲ್ಯವನ್ನು ಒಂದು ಸಾವಿರದ ಎಂಟನೂರ ಮೂವತ್ತನಾಲ್ಕು ಅಂಶಗಳನ್ನು ಮಾಡಿ, ತಮ್ಮ ಅಂಶವಾದ ೦–೮–೦ (ಆಣೆ ಎಂಟು ಮಾತ್ರ) ಇದರೊಂದಿಗೆ Voucher ರೂಪದಲ್ಲಿ ಕಳುಹಿಸಿರುತ್ತೇವೆ. ಅದನ್ನು ನೀವು ಮುಂದಿನ ಚಕ್ರಬಂಧ ಸ್ಪರ್ಧೆಯಲ್ಲಿ ಪ್ರವೇಶ ಧನವನ್ನಾಗಿ ಉಪಯೋಗಿಸಬಹುದು.

ವಂದನೆಗಳು.

ಸೀತಾ ಮೂವತ್ತೆಂಟು ರೂಪಾಯಿಗಳನ್ನು ಕಳುಹಿಸಿದ್ದಾಳೆ! ಅದಕ್ಕೆ ಸಿಕ್ಕಿದ ಬಹುಮಾನ ಎಂಟು ಆಣೆ!

ನಗು ತಡೆಯಲಾರದೆ, ನಕ್ಕೆ.

ಮೂವತ್ತೆಂಟು ರೂಪಾಯಿಗಳ ಖರ್ಚಿನಲ್ಲಿ ಸಿಕ್ಕಿದ ಬಹುಮಾನ ಎಂಟು ಆಣೆಗಳು! ಫಳನೀರಕಾರನ ಭವಿಷ್ಯವೇ? ಬಹುಮಾನ ಸಿಕ್ಕಿದುದೇನೋ ನಿಶ್ಚಯ! ಆದರೆ ಎಷ್ಟು ರೂಪಾಯಿಗಳ ಖರ್ಚಿಗೆ ಎಷ್ಟು ಮೌಲ್ಯದ ಬಹುಮಾನ!! ಎಂತಹ ಅದ್ಭುತ ಭವಿಷ್ಯ!!!

ಗಹಗಹಿಸಿ ನಕ್ಕೆ.

ಅತಿಥಿ ಚತುಷ್ಟಯರೂ ಒಮ್ಮೆಗೆ ಎದ್ದುನಿಂತು ಕೂಗಿದರು – "ಸ್ವಾಮಿ, ನಮ್ಮ ಬಾಕಿ ವಸೂಲಿ?"

ಪತ್ರದೊಂದಿಗೆ ಲಗ್ತೀಕರಿಸಿದ್ದ, Voucher form ಅನ್ನು ಎತ್ತಿದೆ.

"ಇದು ನನಗೆ ಬರುತ್ತದೆಂದು ಇದ್ದ ಬಹುಮಾನದ ಚೆಕ್ಕಿನ ಬಾಬ್ತು, ಎಂಟಾಣೆಯ Voucher."

ಅದು ಸರಿಯಾದ ನಾಲ್ಕು ತುಂಡುಗಳಾಗುವಂತೆ ಹರಿದೆ.

"ತೆಗೆದುಕೊಳ್ಳಿ ಒಂದೊಂದು ತುಂಡನ್ನು! ಮನೆಗೆ ಕೊಂಡುಹೋಗಿ, ಐದೈದು ಬಿಂದು ಜೇನು ಹಾಕಿ ನೆಕ್ಕಿಕೊಳ್ಳಿ!" ಅಂದೆ.

ಅತಿಥಿ ಚತುಷ್ಟಯರು ಅವಾಕ್ಕಾಗಿದ್ದರು!

ಸೀತಾ ಕಲ್ಲುಗೊಂಬೆಯಂತೆ ನಿಶ್ಚೇಷ್ಟಿತಳಾಗಿ ನಿಂತಿದ್ದಳು!!

ನಾನು ಗಹಿಗಹಿಸಿ ನಗುತ್ತಿದ್ದೆ !!!

ಅದೇ ಸಮಯದಲ್ಲಿ ಫಳನೀರಕಾರನ ರಾಶಿ ಭವಿಷ್ಯವನ್ನು ಓದಿ, ಮತ್ತೆಷ್ಟು ಜನರು ಚಕ್ರಬಂಧ ಸ್ಪರ್ಧೆಗೆ ಪ್ರವೇಶ ಧನವನ್ನೂ ಉತ್ತರಗಳನ್ನೂ ಕಳುಹಿಸುತ್ತಿದ್ದರೋ ?

---

# ನಾಮಕರಣ

## ವರ್ತಮಾನ

ಸಾವಿರಾರು ಮೈಲಿಗಳ ದೂರದಿಂದ "ಟ್ರೆಂoooo" ಎಂದು ಗಂಟೆ ಬಾರಿಸಿದುದು ಅಸ್ಫುಟವಾಗಿ ಕೇಳಿ ಬಂತು

"ವಿಜಯಾ ರೆಸ್ಟೋರೆಂಟ"ನಲ್ಲಿ ಆರಾಮಾಸನದಲ್ಲಿ ಹಾಯಾಗಿ ಕುಳಿತು, ರೇಡಿಯೋದಲ್ಲಿ ಸುಬ್ಬುಲಕ್ಷ್ಮಿಯ "ಬ್ರೂಹಿಮುಕುಂದೇತಿ"ಯನ್ನು ಕೇಳುತ್ತಿದ್ದ ನಾನು ಮೆಲ್ಲಗೆ ಕಿವಿಯನ್ನು ಕೊಡವಿಕೊಂಡೆ.

ಆದರೆ

ಪುನಃ ಅದೇ ಅಪಶಕುನ "ಟ್ರೆಂoooooo" ಬಹಳ ಸಮೀಪದಿಂದ ಎಂಬಂತೆ ಕರ್ಣಕಠೋರವಾಗಿ ಕೇಳಿಸಿತು

"ಹಾಳಾದ ಸೈಕಲು" ಎಂದು ಮನಸ್ಸಿನಲ್ಲೇ ಶಪಿಸಿ ಅತ್ತ ಬೆನ್ನು ಮಾಡೋಣವೆಂದು ತಿರುಗಿದರೆ

ಧೊಪ್ಪನೆ ಕೆಳಕ್ಕೆ ಬಿದ್ದೆ ನೆಲಕ್ಕೆ!

ಕಣ್ಣು ಹೊಸಕಿಕೊಂಡು ನೋಡಿದರೆ, "ವಿಜಯಾ ರೆಸ್ಟೋರೆಂಟ್" ಇಲ್ಲ! ಫಕ್ಕನೆ "ಟ್ರಾನ್ಸ್‌ಫರ್ ಸೀನ್" ಯಾನೆ ದೃಶ್ಯ ಬದಲಾವಣೆ!

ಮಧ್ಯಾಹ್ನದ ಹೊತ್ತು ನಾನು ಮನೆಯಲ್ಲಿ ಮಾಳಿಗೆಯಲ್ಲಿ ಮಂಚದ ಮೇಲೆ ಮಲಗಿದ್ದವನು ನೆಲಕ್ಕೆ ಬಿದ್ದಿದ್ದೇನೆ ಅನತಿದೂರದಲ್ಲಿ ಶೇಖರನು

ಆರಾಮಾಸನದ ಮೇಲೆ ಹೆಣದಂತೆ ಬಿದ್ದುಕೊಂಡಿದ್ದಾನೆ. ಮಾತ್ರವಲ್ಲ, ಹುಲಿಯಂತೆ "ಗುರ್‍ರ್‍ರ್‍ರ್" ಎಂದು ಗೊರಕೆ ಹೊಡೆಯುತ್ತಿದ್ದಾನೆ ಕೆಳಗಿನಿಂದ ಸೀತೆಯ ಮಾತುಗಳು ಕೇಳಿ ಬರುತ್ತಿವೆ ಅದರ ನಡುವಿನಲ್ಲಿ ಪುನಃ...

"ಟ್ರಿಂoooooo"

ನಿದ್ರಾನಾಶದ ದೆಸೆಯಿಂದ ಉಂಟಾದ ಕಿಂಚಿತ್ಕ್ರೋಧದಿಂದ ಕೇಳಿದೆ. "ಏ ಸೀತಾ, ಏನೇ ಅದು ಗಲಾಟೆ ?"

ಕೆಳಗಿಂದಲೇ ಸೀತಾ ಉತ್ತರವಿತ್ತಳು "ಏನಿಲ್ಲರೀ, ಒಂದು ಟೆಲಿಗ್ರಾಮು. ಶೇಖರಣ್ಣನಿಗೆ. ಕಳುಹಿಸಿರಿ ಅವರನ್ನು ಕೆಳಗೆ!"

ಟೆಲಿಗ್ರಾಮು ? ಶೇಖರನಿಗೆ ?

"ಶೇಖರ್ !" ಎಂದು ಕೂಗಿದೆ.

ಎಮ್ಮೆಯ ಕಿವಿಯ ಬಳಿಯಲ್ಲಿ ನುಸಿಯು ಹಾಡಿದಷ್ಟೇ ಫಲ!

"ಏ ಶೇಖರ್ !" ಎಂದು ಅರಚಿದೆ

ಶೇಖರನ ಗೊರಕೆಯ ಸಮಾಧಿಯು ಭಂಗವಾಗಲಿಲ್ಲ!

ಎದ್ದು, ಶೇಖರನ ಎರಡು ಭುಜಗಳನ್ನೂ ಅಲುಗಿಸಿದೆ

ಮೆಲ್ಲನೆ ಒಂದು ಕಣ್ಣನ್ನು ತೆರೆದ ಆ ಪುಣ್ಯಾತ್ಮ! "ಆಂ ಏನು ? ಗಂಟೆಯಾಯಿತೇ ? ಆಫೀಸಿನ ವೇಳೆಯಾಯಿತೇ ?" ಎಂದಂದು ಪುನಃ ಕಣ್ಣು ಮುಚ್ಚಿ, ಗೊರಕೆ ಹೊಡೆಯುವ ಸನ್ನಾಹಕ್ಕೆ ತೊಡಗಿದ

"ಏ ಮಹಾರಾಯಾ, ಏಳು. ನಿನಗೊಂದು ಟೆಲಿಗ್ರಾಮು ಬಂದಿದೆ" ಅಂದೆ.

ಟೆಲಿಗ್ರಾಮು ಅಂದ ಕೂಡಲೇ ಆರಾಮಾಸನಕ್ಕೆ ವಿದ್ಯುಚ್ಛಕ್ತಿ ಕೊಟ್ಟಂತೆ, ದಡಮ್ಮನೆ ಎದ್ದು ಕುಳಿತ ಆಸಾಮಿ! "ಏನು ? ಟೆಲಿಗ್ರಾಮೇ ? ಹೊಸದುರ್ಗದಿಂದಲೇ ?" ಅಂದ.

"ಹೊಸದುರ್ಗವೋ ಹಳೆದುರ್ಗವೋ ನಾನರಿಯೆ ಪೇದೆ ಟೆಲಿಗ್ರಾಮು ಹಿಡಕೊಂಡು, ಕೆಳಗೆ ಚಾವಡಿಯಲ್ಲಿ ಕಾದಿದ್ದಾನೆ ಹೋಗಿ ನೋಡು. ನಾನು ಅಂಗಿಯನ್ನು ಸಿಕ್ಕಿಸಿಕೊಂಡು ಈಗ ಬಂದೆ " ಅನ್ನುವಷ್ಟರಲ್ಲಿ ಶೇಖರ ವಾಯುವೇಗದಲ್ಲಿ ಚ ಲಿ ಸ ಲಾ ರಂ ಭಿ ಸಿ, ಮಾಳಿಗೆಯ ಅರ್ಧ ಮೆಟ್ಟಲುಗಳನ್ನು ಇಳಿದಿದ್ದಾನೆ.

ಟೆಲಿಗ್ರಾಮು ಹೊಸದುರ್ಗದಿಂದ? ಬಹುಶಃ ಸೋನಿಯಾ ಪ್ರಸವಿಸಿದ್ದಾಳೆ!

ಅಂಗಿಯ ಅನ್ವೇಷಣಕ್ಕೆ ತೊಡಗಿದೆ

## ಭೂತ

ಅಂದಿನ ಆ ದಿನವನ್ನು ಮರೆಯುವುದುಂಟೇ?

ಸೋನಿಯಾಳ ಸೀಮಂತವಾಯಿತು. ಅಭೂತಪೂರ್ವವಾದ ವೈಭವದಿಂದ ಜರುಗಿತು. ಶೇಖರನು ಹಣವನ್ನು ನೀರಿನಂತೆ ವ್ಯಯಿಸಿದ ಏನು ಆ ಗದ್ದಲ! ಏನು ಆ ಮೋಜು!!

ನಾನೂ ಸೀತೆಯೂ ಸೀಮಂತದ ಮುನ್ನಾದಿನವೇ ಶೇಖರನ ಮನೆಯಲ್ಲಿ ಬಿಡಾರ ಹೂಡಿದ್ದೆವು. ನಾವಿಲ್ಲದೆ ಸೋನಿಯಾಳ ಸೀಮಂತವಿದೆಯೇ? ನಾನೂ ಶೇಖರನೂ ಆಪ್ತ ಮಿತ್ರರು. ಸೋನಿಯಾ ಮತ್ತು ಸೀತಾ ಅಂದರೆ "ಜೀವಶ್ಚ ಕಂಠಶ್ಚ. ." ಅಂತಾರಲ್ಲ – ಹಾಗೆ. ಸೀತೆಗೆ ಸೋನಿಯಾ ಅಂದರೆ ಪ್ರಾಣ! ಸೋನಿಯಾಗೆ ಸೀತಾ ಅಂದರೆ ಜೀವ!! ಹಾಗಿರುವಾಗ ನಾವು ಹೋಗಿ, ಸ್ವಲ್ಪ ಸಹಾಯ ಮಾಡದಿದ್ದರೆ ಅದು ಸಾಧ್ಯವಿಲ್ಲದಿದ್ದಲ್ಲಿ, ಸ್ವಲ್ಪ ಗಲಭೆಯನ್ನಾದರೂ ಹೆಚ್ಚಿಸದಿದ್ದರೆ ..ನಡೆದೀತೇ? ಸೀತೆಯಂತೂ ಎರಡು ತಿಂಗಳ ಮೊದಲೇ "ಅಲ್ಟಿಮೇಟಂ" ಕೊಟ್ಟಿದ್ದಳು "ಸೋನಿಯಾಳ ಸೀಮಂತದ ಬಾಬತ್ತಿನಲ್ಲಿ ನಾಲ್ಕು ದಿನಗಳ ರಜೆಯನ್ನು ಪಡಕೊಳ್ಳಲೇಬೇಕು! ನಿಮ್ಮ ಡಾಕ್ಟರರು ರಜೆಯನ್ನು ಕೊಡದಿದ್ದರೆ, ಕೆಲಸಕ್ಕೆ ರಾಜಿಯನ್ನಾದರೂ ಕೊಟ್ಟು, ಸೀಮಂತಕ್ಕೆ ಹಾಜರಾಗಬೇಕು! ಸೋನಿಯಾ ಹೇಳಿದ್ದಾಳೆ ನಾವೇ ಎಲ್ಲವನ್ನೂ ಸುಧಾರಿಸಬೇಕೆಂದು. ಆದುದರಿಂದ ಜಾಗ್ರತೆ!" – ಎಂದು. ಡಾಕ್ಟರರಿಗೆ ಈ "ಅಲ್ಟಿಮೇಟಂ" ತಿಳಿದೋ ತಿಳಿಯದೆಯೋ ಕಂಪೌಂಡರರಿಗೆ ರಜೆಯನ್ನು ದಯಪಾಲಿಸಿದರು. ನಂತರ ಕೇಳಬೇಕೇ? ಸೀತಾ ಒಂದು ಕೆಲಸವನ್ನು ಮಾಡಲು ಒಪ್ಪಿಕೊಂಡಳು ಎಂದರೆ ನಂತರ ಹೇಳಬೇಕೆ? ಶೇಖರನ ಮನೆಯ ಗೋಡೆಗೆ ಸುಣ್ಣ ಬಳಿಯಲಿಕ್ಕೆ ನಾನು, ನೆಲವನ್ನು ಸಾರಿಸಿ, ರಂಗವಲ್ಲಿ ಹಾಕುವುದಕ್ಕೆ ಸೀತಾ. ಮರಹತ್ತಿ, ಮಾವಿನ ಸೊಪ್ಪು ಕಡಿದು ತರಲಿಕ್ಕೆ ನಾನು, ಅದನ್ನುಅಂದವಾಗಿ ಕಟ್ಟಿ,

ಮುಂಬಾಲಿಗೆ ತೋರಣ ಕಟ್ಟುವುದಕ್ಕೆ ಸೀತಾ. ಅಡಿಗೆ ಕೋಣೆಯೊಳಹೊಕ್ಕು, ಏನಿದೆ–ಏನಿಲ್ಲ – ಎಂಬುದನ್ನು ತಿಳಿದು, ಏನು ಇನ್ನು ಬೇಕಾಗಿದೆ - ಎಂಬುದನ್ನು ಅರಿತು, ಪಟ್ಟಿ ತಯಾರಿಸಲಿಕ್ಕೆ ಸೀತಾ, ಆ ಪಟ್ಟಿಯನ್ನು ಪೇಟೆಗೆ ಕೊಂಡು ಹೋಗಿ, ಹಲವಾರು ಅಂಗಡಿಗಳನ್ನು ಸುತ್ತಾಡಿ, ಸಾಮಾನುಗಳನ್ನು ಶೇಖರನ ಮನೆಗೆ ಸಾಗಿಸಲಿಕ್ಕೆ ನಾನು. ಸೀಮಂತದ ಭೋಜನಕ್ಕೆ ಭಕ್ಷ್ಯವೇನು – ಅಂತ ಪ್ರಶ್ನಿಸಲಿಕ್ಕೆ ಸೋನಿಯಾ. “ನನಗೆ ಜಿಲೇಬಿ ಅಂದರೆ ಪ್ರೀತಿ. ಅದೇ ಆಗಬಹುದು” – ಎಂದು ಸೂಚಿಸಲಿಕ್ಕೆ ನಾನು. ಸೀತೆಗೆ ಹೋಳಿಗೆ ಅಂದರೆ ಮೆಚ್ಚು. “ಹೋಳಿಗೆಯೇ ಆಗಬೇಕು” – ಅಂದಂದು ನನ್ನ ಸೂಚನೆಯನ್ನು ರದ್ದುಗೊಳಿಸಲಿಕ್ಕೆ ಸೀತಾ “ಎರಡೂ ಇರಲಿ” – ಎಂದು ತೀರ್ಪು ಕೊಡಲಿಕ್ಕೆ ಶೇಖರ. ಅಂತೂ ಸೋನಿಯಾಳ ಸೀಮಂತಕ್ಕಾಗಿ ವ್ಯಯಿಸಿದ ನಮ್ಮ ಉತ್ಸಾಹದ ಬರೇ ಅರ್ಧಾಂಶದಿಂದಲೇ ಪೂರ್ವಕಾಲದಲ್ಲಿಯಾದರೆ, ಒಂದು ಅಶ್ವಮೇಧ ಯಜ್ಞವನ್ನು ಪೂರೈಸಿ ಬಿಡಬಹುದಿತ್ತು!

ಸಂಭ್ರಮದ ಸನ್ನಾಹ ನಡೆಯಿತು ಹೇಳುವವರಿಗೆಲ್ಲ ಹೇಳಿಕೆ ಯಾಯಿತು. ಹೊಸದುರ್ಗದಿಂದ ಶೇಖರನ ಅತ್ತೆ – ಮಾವ, (ಸೋನಿಯಾಳ ತವರುಮನೆ ಹೊಸದುರ್ಗದಲ್ಲೇ!) ಹಳೇಬೀಡಿನಿಂದ ಸೋನಿಯಾಳ ಅಣ್ಣ – ಅತ್ತಿಗೆ, ಮಲ್ಲೇಶ್ವರದಿಂದ ಸೋನಿಯಾಳ ಸೋದರಮಾವ; ರಾಮೇಶ್ವರದಿಂದ ಶೇಖರನ ಸೋದರಮಾವ, – ಇತ್ಯಾದಿ ಎಲ್ಲಾ ಬಂಧು – ಬಾಂಧವರು ಸೀಮಂತದ ಮುನ್ನಾದಿನವೇ ಹಾಜರಾದರು ಇದ್ದುದರೊಂದಿಗೆ ಇಲ್ಲದ್ದನ್ನೂ ಕೂಡಿಸಿ, ಬಂದವರ ಜೊತೆಗೆ ಬಾರದವರನ್ನೂ ಸೇರಿಸಿ, ರೇಶನ್ ಆಫೀಸರರಿಗೆ ಅರ್ಜಿ ಸಲಾಯಿಸಿ, ಸಾಧ್ಯವಿದ್ದಷ್ಟು ಅಕ್ಕಿಯನ್ನು ಸಂಗ್ರಹಿಸಿಯಾಯಿತು. ಸಾಲದ್ದಕ್ಕೆ ಹಳ್ಳಿಗಳಿಂದ “ಬ್ಲಾಕ್ ಮಾರ್ಕೆಟ್” ಅಕ್ಕಿಯನ್ನು ತರಿಸಿ ಯಾಯಿತು. ಮಧ್ಯಾಹ್ನದ ಊಟಕ್ಕೆಂದು ಸಂಗ್ರಹಿಸಿದ ಪದಾರ್ಥಗಳಿಂದ ಉಗ್ರಾಣ ತುಂಬಿತು. ಸಾಯಂಕಾಲದ ಟೀ – ಪಾರ್ಟಿ”ಗೆ ವಿಜಯಾ ರೆಸ್ಟೋರೆಂಟಿಗೆ “ಆರ್ಡರು” ಕೊಟ್ಟಾಯಿತು. ಇನ್ನೇನು? ಚಂದ್ರಾಸ್ತಮಾನವಾಗಿ, ಸೂರ್ಯದೇವನು ಸಪ್ತಾಶ್ವ ರಥವನ್ನೇರಿ, ಅರುಣನ ಸಾರಥ್ಯದೊಡನೆ, ಪೂರ್ವಾಚಲದಿಂದ ಉದಯವಾಗುವುದು ಮಾತ್ರ ಉಳಿದಿತ್ತು.

ರಾತ್ರಿ ಯಾರಿಗೂ ನಿದ್ದೆಯಿರಲಿಲ್ಲ. ಗಲಭೆಯೇ ಗಲಭೆ! ಶೇಖನರ ಮಾವ

ನಮ್ಮ ಈ ಸನ್ನಾಹಗಳನ್ನು ಕಂಡು, ದಿಙ್ಮೂಢರಾಗಿದ್ದರು. ಯಾಕೆಂದರೆ ಇದು ಬರೇ ಸೀಮಂತದ ಸನ್ನಾಹವೋ ಯಾ ಬೇರೆ ಏನಾದರೂ ಮದುವೆಯ ಏರ್ಪಾಡೋ? – ಎಂದು. ಮೆಲ್ಲನೆ ಕೇಳಿದರು. "ಏಕೆ ಇಷ್ಟು ಗಲಭೆ? ಚಿಕ್ಕದರಲ್ಲಿಯೇ ಸುದಾರಿಸಬಹುದಿತ್ತು"– ಎಂದರು ನಾನು ಬಾಯಿ ತೆರೆಯು ವಷ್ಟರೊಳಗೆ ಸೀತೆಯೇ ಹೇಳಿದಳು. "ಸೋನಿಯಾ ನನ್ನ ಜೀವದ ಗೆಳತಿ. ಅವಳ ಜೀವನಾಕಾಶದಲ್ಲಿ ಬಾಲಚಂದ್ರಮನ ಉದಯವಾಗಲಿದೆ. ನಾಳಿನ ದಿನ ಸಾವಿರಾರು ಜನರು ಸಂತೃಪ್ತರಾಗುತ್ತಾರೆ ಅವರೆಲ್ಲರ ಆಶೀರ್ವಾದ ಬಲದಿಂದ ಸೋನಿಯಾಳು ಸುಖರೂಪವಾಗಿ ಪ್ರಸವಿಸಿ, ಸುಂದರವಾದ ಕುಮಾರನಿಗೆ ಜನ್ಮ ವನ್ನೀಯಲಿ" ಎಂದಳು. ಶೇಖರನ ಮಾವ "ತಥಾಸ್ತು!" ಅಂದು ನಕ್ಕರು.

ಅರುಣಾಚಲದಿಂದ ಉದಯವಾಯಿತು. ಪೌರೋಹಿತ್ಯಕ್ಕೆ ಪುಟ್ಟಣ್ಣ ಭಟ್ಟರು, ಪಾರುಪತ್ಯಕ್ಕೆ ಪಾಪಣ್ಣಾಚಾರ್ಯರು, ಅಡಿಗೆಗೆ ಅನಂತ ಐತಾಳರು, ವಾದ್ಯಕ್ಕೆ ವಾಮನ ಶೇರಿಗಾರ, ಬೇಂಡಿಗೆ ಬೆಂಜಮಿನ್, – ಇನ್ನೇನು ಹೇಳುವುದು ಸೀಮಂತದ ವೈಭವವನ್ನು?

ಸೀಮಂತವಾಯಿತು. ಬ್ರಾಹ್ಮಣರ ವೇದಘೋಷಗಳಿಂದ ಆಹ್ವಾನಿತರಾದ ದೇವತೆಗಳು – ಹೋಮದಲ್ಲಿ ಸುರಿಸಿದ ಘೃತ – ಹವಿಸ್ಸು ಇತ್ಯಾದಿಗಳಿಂದ ಸಂತುಷ್ಟರಾದರು. ರೇಶನ್ ಕಾಲದಲ್ಲಿಯಾದರೂ ಹೊಟ್ಟೆ ತುಂಬಾ ಹಾಕಿದ ಭೋಜನದಿಂದಲೂ ಕೈ ತುಂಬಾ ಕೊಟ್ಟ ದಕ್ಷಿಣಾ ದ್ರವ್ಯದಿಂದಲೂ ದ್ವಿಜರು ಸಂತುಷ್ಟರಾದರು ಸಾಯಂಕಾಲದ "ಟೀ – ಪಾರ್ಟಿ" ಸತ್ಕಾರಗಳಿಂದ ಆಪ್ತೇಷ್ಟ ಮಿತ್ರರು ಆನಂದವನ್ನು ಹೊಂದಿದರು. ಎಲ್ಲರೂ ಹೃತ್ಪೂರ್ವಕವಾಗಿ ದಂಪತಿಗಳನ್ನು ಹರಸಿದರು.

ರಾತ್ರೆಯ ಊಟವಾಗಿತ್ತು ಎರಡು – ಮೂರು ದಿನಗಳಿಂದ ಸೀಮಂತದ ಗಡಿಬಿಡಿಯಲ್ಲಿ ದಣಿದು, ಬಳಲಿ, ಬೆಂಡಾದ ದೇಹವನ್ನು ಒಂದು ಆರಾಮಾಸದ ಮೇಲೆ ಹೊತ್ತುಹಾಕಿ, ಚಪ್ಪರದ ಒಂದು ಮೂಲೆಯಲ್ಲಿ ತುಸು ವಿಶ್ರಾಂತಿಗಾಗಿ ಕುಳಿತು, ಒಂದು ಸೀಗರೇಟನ್ನು ಹೊತ್ತಿಸಿ, ಹೊಗೆಯನ್ನು ಬಿಡುತಿದ್ದೆ ಅಲ್ಲಿಗೆ ಥುತ್ತೆಂದು ಶೇಖರನ ಸವಾರಿ ಬಂತು

ಬಂದವನೇ ಒಂದು ಕುರ್ಚಿಯನ್ನೆಳೆದು, ನಿಟ್ಟುಸಿರಿಟ್ಟ, ಕುಳಿತ. ನನ್ನ

ಕೈಯಿಂದ ಒಂದು ಸಿಗರೇಟು ಇಸಕೊಂಡು, ಬೆಂಕಿ ಹೊತ್ತಿಸಿದ. ಪುನಃ ಒಂದು ನಿಟ್ಟುಸಿರೆಳೆದು, “ ಹಾಳಾದರು ಈ ಶಾಸ್ತ್ರಕಾರರು ! ಅಂದ

ಕುತೂಹಲವಾಯಿತು. ಜ್ವಾಲಾಮುಖಿಯ ಸ್ಫೋಟವಾದಂತೆ. ಫಕ್ಕನೆ ಶೇಖರನು ಶಾಸ್ತ್ರಕಾರರ ಮೇಲೆ ಕತ್ತಿಯೆತ್ತಬೇಕಾದರೆ “ಏನಾಯಿತು ?” ಎಂದು ಪ್ರಶ್ನಿಸಿದೆ.

“ಅಲ್ಲ, ಪ್ರಥಮ ಹೆರಿಗೆ ತವರುಮನೆಯಲ್ಲಂತೆ. ಹಾಗಂತ ಶಾಸ್ತ್ರ ವಿದೆಯಂತೆ !” ಅಂದ ಶೇಖರ

ಭಲೇ ಶೇಖರ! ಹೆಂಡತಿಯು ಹೆರಲಿಕ್ಕೆ ತವರುಮನೆಗೆ ಹೋಗುತ್ತಾ ಳೆಂಬುದಕ್ಕಾಗಿಯೇ ಇಷ್ಟು ನಿಟ್ಟುಸಿರುಗಳು ! “ಹೋಗಲಿ. ನಿನಗೇನು? ಒಂದು ಬಾಧೆ ಉಳಿಯಿತು. ಎಲ್ಲಾದರೂ ಹೆರಿಗೆಯ ಬೇನೆ ಆರಂಭವಾದರೆ, ನಡುರಾತ್ರಿಯೆಂದು ಕೂಡಾ ಗಣಿಸದೆ, ಮಿಡ್‌ವ್ಯಾಫ್ – ನರ್ಸ್ ಡಾಕ್ಟರರನ್ನು ಕರಕೊಂಡು ಬರುವ ಕಷ್ಟ ಉಳಿಯಿತು ” ಅಂದೆ

“ತಾಪತ್ರಯ ಹಾಳಾಯಿತು ಆದರೆ ಈಗ ಸೋನಿಯಾಗೆ ಎಂಟು ತಿಂಗಳು ಇನ್ನೆರಡು ತಿಂಗಳು ಹೆರಲಿಕ್ಕೆ ನಂತರ ನಾಲ್ಕು ತಿಂಗಳು ಬಾಣಂತಿ ತನದಿಂದ ಏಳಲಿಕ್ಕೆ ಈ ಆರು ತಿಂಗಳು ಕಾಲ ಅವಳನ್ನು ಬಿಟ್ಟು ಇರುವು ದೆಂದರೆ? ನಾಡಿದ್ದು ದಿವಸ ಒಳ್ಳೆಯದು ಇದೆಯಂತೆ. ಅಂದೇ ಸೋನಿಯಾಳನ್ನು ಕರಕೊಂಡು ಹೋಗುತ್ತಾರಂತೆ ಹೊಸದುರ್ಗಕ್ಕೆ” ಎಂದಂದು, ಪುನಃ ಒಂದು ನಿಟ್ಟುಸಿರೆಳೆದ.

ರಾತ್ರೆ ಬೆಳಗಾಯಿತು. ಕಾಫಿ ಫಲಾಹಾರದ ಸಮಯ. ಮೆಲ್ಲನೆ ಶೇಖರ ಹೇಳಿದ. “ರಾಮೂ, ಇವತ್ತು ಸಾಯಂಕಾಲ ಒಂದು ‘ಟ್ರಿಪ್’ ಇದೆ.”

ಟ್ರಿಪ್ ? “ಎಲ್ಲಿಗೆ?” ಅಂದು ಪ್ರಶ್ನಿಸಿದೆ.

“ಸಮುದ್ರ ತೀರಕ್ಕೆ. ವಾಯುವಿಹಾರಕ್ಕೆ !”

“ಯಾರು ಹೇಳಿದರು ?” ಅಂತ ಪ್ರಶ್ನಿಸಿದೆ.

“ಸೋನಿಯಾ !” ಅಂದ ಶೇಖರ.

“ಹೋಗಿ ನೀವಿಬ್ಬರು !” ಅಂದೆ.

“ನಾವಿಬ್ಬರು ಮತ್ತು ನೀವಿಬ್ಬರು. ಸೋನಿಯಾ ಹೇಳಿದ್ದಾಳೆ – ನಾನು, ನೀನು, ಸೋನಿಯಾ ಮತ್ತು ಸೀತಾ – ನಾಲ್ವರೇ !” ಅಂದ.

ಸಾಯಂಕಾಲ ವಾಯುವಿಹಾರಕ್ಕೆ ಸಮುದ್ರ ತೀರಕ್ಕೆ ಹೋದೆವು.

ಸಮುದ್ರದ ತೆರೆಗಳಿಗೆ ಕಾಲೊಡ್ಡಿ ಕುಳಿತೆವು ಸಮುದ್ರ – ದೂರ್ಮಿಗಳು ಒಂದೊಂದಾಗಿ ನಾ ಮುಂದು–ನಾ ಮುಂದೆಂದು ಬಂದು, ನಮ್ಮ ಕಾಲುಗಳನ್ನು ತೊಳೆದು, ಮರಳುವುದು ಎಷ್ಟು ಆನಂದ!

ಮರಳಲ್ಲೇ ಮಕ್ಕಳಂತೆ ಆಡಿದೆವು.

ಸೀತಾ ಒಂದು ಮರಳಿನ ಮನೆಯನ್ನು ಕಟ್ಟಿದಳು. ಸೋನಿಯಾ ಅದರ ಸುತ್ತು ಒಂದು ಉದ್ಯಾನವನ್ನು ರಚಿಸಿದಳು. ನಾನು ಅದರ ನಡುವಿನಲ್ಲಿ ಮೂರು ಕಡ್ಡಿಗಳನ್ನು ನೆಟ್ಟು, "ಇದು ಶೇಖರ, ಇದು ಸೋನಿಯಾ, ಇದು ಅವರ ಬೇಬಿ!" ಅಂದೆ.

"ಬೇಬಿ?" ಅಂದು ಹುಬ್ಬು ಗಂಟಿಕ್ಕಿದಳು ಸೀತಾ. "ಆಂಗ್ಲರು ಊರು ಬಿಟ್ಟು ಹೋಗಿ, ಹಿಂದೀಯರಿಗೆ ಸ್ವರಾಜ್ಯವಾದರೂ, ಅವರ ಆ ಭಾಷೆ ಇನ್ನೂ ಬಿಡಲಾಗಲಿಲ್ಲವಲ್ಲ? ಬೇಬಿಯಂತೆ ಬೇಬಿ!"

"ಹಾಗಾದರೆ ಬೇಬಿ ಬೇಡ, ಮುದ್ದುಮಣಿ ಎಂದು ಹೆಸರಿಡೋಣ" ಎಂದೆ ನಾನು.

ಶೇಖರನೆಂದ. "ಒಳ್ಳೇ ಪ್ರಸಂಗವಾಯಿತಲ್ಲ! ಮೊದಲು ಮಗು ಜನ್ಮಕ್ಕೆ ಬರಲಿ. ಆ ನಂತರ ಹೆಸರಿಡೋಣ."

"ಮಗು ಹುಟ್ಟುವುದು ಖಂಡಿತವೆಂದಾದ ಮೇಲೆ ಹೆಸರನ್ನು ಮೊದಲೇ ನಿಶ್ಚಯಿಸಿಟ್ಟುಕೊಂಡರೇನು?. ಏನೇ ಸೋನಿಯಾ? ನಾನಂತೂ ಮಗುವಿನ ಹೆಸರನ್ನು ನಿಶ್ಚಯಮಾಡಿಕೊಳ್ಳದೆ ಇಲ್ಲಿಂದ ಅಲುಗುವಂತಿಲ್ಲ!" ಅಂದಂದು ಪದ್ಮಾಸನ ಹಾಕಿ ಕುಳಿತಳು ಸೀತಾ.

ಈ ರೀತಿ ಮಕ್ಕಳಾಟದಂತೆ ಆರಂಭಿಸಿ, ಸೋನಿಯಳ ಮುಂದೆ ಹುಟ್ಟಲಿರುವ ಶಿಶುವಿನ ನಾಮಕರಣವು ಪ್ರಾರಂಭವಾಯಿತು.

ಶೇಖರನೊಂದು ಆಕ್ಷೇಪವನ್ನೆತ್ತಿದ. "ಹುಟ್ಟಲಿರುವ ಮಗು ಗಂಡೋ ಹೆಣ್ಣೋ ಎಂದು ತಿಳಿಯುವ ಮೊದಲು, ಹೆಸರಿನ ನಿಶ್ಚಯವಾದರೂ ಹೇಗೆ?" ಎಂದ.

ಅದೂ ಹೌದು.

ಆದರೆ ಸೀತಾ ಹೇಳಿದಳು. " ಸೋನಿಯಾಳಿಗೆ ಹೆಣ್ಣುಮಗು ಎಂದರೆ ಇಷ್ಟ. ಅಲ್ಲವೇ ಸೋನಿಯಾ ? ಅವಳಿಗೆ ಹೆಣ್ಣೇ ಹುಟ್ಟುವದು !"

ನಾನೆಂದೆ. " ಛೆ, ಅಪಶಕುನ ನುಡಿಯಬೇಡ. ಅವಳಿಗೆ ಹುಟ್ಟಲಿರುವ ಮಗು ಗಂಡು !"

ಸೀತಾ ಅಂದಳು. " ಸೋನಿಯಾಗೆ ಹೆಣ್ಣುಮಗುವಾಗಬೇಕೆಂಬ ಆಸೆ. ಆದ್ದರಿಂದ ಹೆಣ್ಣೇ ಹುಟ್ಟುತ್ತದೆ !"

ನಾನೆಂದೆ. " ಶೇಖರನಿಗೆ ಗಂಡು ಮಗುವೆಂದರೆ ಮೆಚ್ಚು. ಆದ್ದರಿಂದ ಗಂಡೇ ಹುಟ್ಟುತ್ತದೆ !"

ನಗುತ್ತಾ ಶೇಖರನೆಂದ. " ನಮ್ಮ ಮಗುವಿನ ವಿಚಾರದಲ್ಲಿ ನೀವು ಅಷ್ಟೊಂದು ಹೊಡೆದಾಡುವ ಕಾರಣವಿಲ್ಲ ಏನು ಮಗುವಾದರೂ ಬಿಡಲು ಸಿದ್ಧರಿಲ್ಲ. ಆದ್ದರಿಂದ ಗಂಡಾದರೆ ಈ ಹೆಸರು, ಹೆಣ್ಣು ಆದರೆ ಈ ಹೆಸರು ;– ಎಂದು ನಿಶ್ಚಯಿಸಿ ಇಡೋಣ " ಅಂದ.

ಸೂಕ್ತವಾದ ಯೋಚನೆ ! " ನಾನೇ ಮೊದಲು ಗಂಡುಮಗುವಿನ ಹೆಸರನ್ನು ಹೇಳುತ್ತೇನೆ ಸೀತಾ ಹೆಣ್ಣುಮಗುವಿನ ಹೆಸರನ್ನು ಹೇಳಲಿ. ಸೋನಿಯಾ ಮತ್ತು ಶೇಖರ – ಇವರು ಯಾವುದು ಬೇಕೋ ಅದನ್ನು ಆರಿಸಲಿ " ಅಂದೆ.

" ಸರಿ, ಪ್ರಾರಂಭಿಸಿ " ಅಂದ ಶೇಖರ

ಕೊಂಚ ಹೊತ್ತು ಯೋಚಿಸಿ, " ಚಂದ್ರಶೇಖರ. " ಅಂದೆ.

" ಚಂದ್ರಶೇಖರ ? ಬಹಳ ಒಳ್ಳೇ ಹೆಸರು !!" ಎಂದು ಅಣಕವಾಡುತ್ತಾ ನುಡಿದಳು ಸೀತಾ.

" ಏನೇ ಅದು ? ಏನಾಗಿದೆ ಆ ಹೆಸರಿಗೆ ?" ಎಂದು ಪ್ರಶ್ನಿಸಿದೆ ಕ್ರೋಧದಿಂದ.

" ಏನಿಲ್ಲರೀ, ಮಗುವಿನ ಹೆಸರನ್ನು ಕೂಗಬೇಕಾದರೆ, ಗಂಡನ ಹೆಸರನ್ನು ಎತ್ತಬೇಕಾಯಿತು ಸೋನಿಯಾ !" ಅಂದಳು.

ಅದೂ ಹೌದು. ಪುನಃ ಯೋಚಿಸಿ, " ಗಿರೀಶ, ಮಹೇಶ, ರಮೇಶ...."

". ದಿನೇಶ, ಗಣೇಶ, ಸುರೇಶ ಗೊತ್ತು ನಮಗೆ ಮೂವತ್ತಮೂರು ಕೋಟಿ ದೇವತೆಗಳು ಇದ್ದಾರೆಂದು !" ಅಂದಳು ಸೀತಾ.

" ಹರಿಶ್ಚಂದ್ರ "

" ಈ ಕಲಿಯುಗದಲ್ಲಿ ?"

" ಶರಚ್ಚಂದ್ರ "

" ಥೇಟು ಗೌಡಬಂಗಾಳಿ ಹೆಸರು !"

" ಹಾಗಾದರೆ. ರಮಾನಂದ, ನಿತ್ಯಾನಂದ, ದಯಾನಂದ "

" ಯಾವ ಮರದ ಸ್ವಾಮಿಯಾಗಲಿರುವನೋ ಆ ಹುಡುಗ ?"

" ರಾಮು, ಕೃಷ್ಣ, ಪ್ರಹ್ಲಾದ, ಪ್ರದ್ಯುಮ್ನ , ಅನಿರುದ್ಧ . "

ಸೋನಿಯಾ ಶೇಖರರು ಕೂಡಾ ನಕ್ಕರು

ಸೀತಾ ಅಂದಳು. " ನಿಲ್ಲಿ, ಇನ್ನು ಸ್ವಲ್ಪ ಸಮಯದಲ್ಲಿ ರಾವಣ, ಕುಂಭಕರ್ಣ, ಕಂಸ, ದುರ್ಯೋಧನ, ದುಶ್ಶಾಸನ ಇತ್ಯಾದಿಗಳು ಕೂಡಾ ಬರುತ್ತಾರೆ. ಅವರಿಗೆ ಪುರಾಣದ ಹೆಸರುಗಳಲ್ಲದೆ, ಬೇರೆ ಈಗಿನ ಹೊಸ ಹೆಸರು ಗಳೇ ಬರುವುದಿಲ್ಲ !"

ಕಷ್ಟಕ್ಕಿಟ್ಟುಕೊಂಡಿತಲ್ಲ ! ಏನು ಈಗಿನ ಹೆಸರುಗಳು !! ಹೂಂ. .. " ಅಶೋಕ ಕುಮಾರ, ಪೃಥ್ವೀರಾಜ, ಮೋತೀಲಾಲ. "

" ಏನ್ರೀ ಸಿನೇಮಾ ನಟರ ಯಾದಿ ತಯಾರಿಸುತ್ತೀರೋ ?"

ಏನು ಗ್ರಹಚಾರವಿದು ? ನಾನು ಹೇಳಿದ ಒಂದು ಹೆಸರೂ ಸಮರ್ಪಕ ವಾಗುವುದಿಲ್ಲವೇ ? " ತಡೆ ನೋಡೋಣ " ನಾನೆಂದೆ " ಜವಾಹರ, ಬಲವಂತ, ರಾಜೇಂದ್ರ "

ನಡುವಿನಲ್ಲೇ ಪುನಃ ಸೀತೆಯ ಕೊಂಕುನುಡಿ " ಅಬ್ದುಲ್ ಗಫರ್ ಖಾನ್, ಮಹಮ್ಮದ ಆಲಿ, ಲಿಯಾಖತ್, ಕಾಸೀಂ ರಜ್ವಿ ಹೇಳ್ರೀ, ಸಿನೇಮ ಸಂಸಾರದಿಂದ ರಾಜಕೀಯ ರಂಗಕ್ಕಿಳಿದಿರೇನು ?"

ಹತಾಶನಾದೆ. ಸೋತೆ ಎಂದು ಒಪ್ಪಿಕೊಂಡೆ. " ಶೇಖರ, ಇನ್ನು ನನ್ನ ಹೆಸರುಗಳ ಭಂಡಾರ ಖಾಲಿಯಾಯಿತು. ನೀನೇ ಸೂಚಿಸಿನ್ನು !" ಅಂದೆ

ಸೋನಿಯಾ ನಕ್ಕಳು. " ಬೇಡ, ಹೋಗಲಿ. ಇನ್ನು ಹುಡುಗಿಯ ಹೆಸರನ್ನು ಹೇಳಿರಿ " ಅಂದಳು.

ನಾನು ಸೀತೆಯೆಡೆ ತಿರುಗಿದೆ. " ಹೂಂ, ಬಂತು ಇನ್ನು ನಿನ್ನ ಸರದಿ. ಹೇಳಿಬಿಡು ನೋಡೋಣ ನಾಮಾವಳಿಯನ್ನು" ಅಂದೆ.

ಸೀತಾ ತಲೆಯನ್ನಲುಗಿಸಿದಳು

" ಊಹುಂ ಅಂದರೆ ? ಆಗಲೇ ಒಪ್ಪಿಕೊಂಡಿದ್ದೆಯಲ್ಲ ? ಈಗ ಆರಂಭಿಸು" ಅಂದೆ.

" ಇಲ್ಲ ಅಂದರೆ ಆಗಲಿಲ್ಲ. ಇಷ್ಟರತನಕ ನಿನ್ನ ಅವಹಾಸ್ಯವನ್ನು ಕೇಳಿಯೂ ಹೆಸರುಗಳನ್ನು ಹೇಳಲಿಲ್ಲವೇ ರಾಮು ? ಇನ್ನು ನಿನ್ನ ಸರದಿ. ಅವನ ಸರದಿ ಅಣಕಿಸಲಿಕ್ಕೆ !" ಎಂದು ನಕ್ಕ ಶೇಖರ

ಸೋನಿಯಾ ಕೂಡ ನಕ್ಕಳು " ಹೂಂ ಆರಂಭಿಸು ಸೀತಾ " ಅಂದಳು.

ಕೊನೆಗೇನು ಮಾಡುವಳು ಸೀತಾ. ಮೆಲ್ಲನೆ, ತಲೆತಗ್ಗಿಸಿ, " ಕಾಂಚನ ಮಾಲಾ " ಎಂದು ಆರಂಭಿಸಿದಳು.

ಗೊಳ್ಳೆಂದು ನಕ್ಕುಬಿಟ್ಟೆ " ಕಾಂಚನ ಬೇರೆ : ಮಾಲೆ ಬೇರೆ ಒಳ್ಳೆಯ ಹೆಸರು ಹೂಂ, ಮುಂದರಿಸು. ಕಾನನ್‌ಬಾಲಾ ಆಗದೇ ?" ಅಂದೆ.

" ಕೌಸಲ್ಯಾ "

" ದಶರಥನೆಂಬ ಹೆಸರಿನ ವರ ಸಿಗುವುದು ಕಷ್ಟ !" ಅಂದೆ

" ತಾರಾ, ಊರ್ಮಿಳಾ, ಸಾವಿತ್ರೀ "

" ಸಾವಿತ್ರಿ ? ಯಮನೊಡನೆ ಹೋರಾಟ ಈ ಕಲಿಯುಗದಲ್ಲಿ ಕಷ್ಟ !"

" ಗೌರೀ, ಉಮಾ, ಶಂಕರಿ "

" ಎಲಾ ಗಿರಿಬಾಲೆ, ಏನು ? ಹುಡುಗಿಯನ್ನು ಗಟ್ಟಕ್ಕೆ ಅಟ್ಟುವ ಯೋಚನೆಯೇ ? ಆಧುನಿಕ ಹೆಸರು ಹೇಳಬಾರದೇ ?"

" ಸುಚೇತಾ, ಸುನೀತಾ, ವಿನೀತಾ "

" ಬಹುಭೀತಾ ಪರಿಣೀತಾ, ನವನೀತಾ " ಅಂದು ಅಣಕ ವಾಡಿದೆ

ಸೀತೆಗೆ ಕೋಪ ಬಂತೆಂದು ತೋರಿತು. " ಏನ್ರೀ, ಸುಮ್ಮಸುಮ್ಮನೆ ನಡುವಿನಲ್ಲಿ ಕೊಂಕುನುಡಿಯನ್ನಾಡುತ್ತೀರಿ ?"

" ನಾನು ಹೆಸರು ಹೇಳುವಾಗ್ಗೆ ನೀನೇನು ಬಾಯಿ ಮುಚ್ಚಿ, ಕುಳಿತಿದ್ದೆಯೇ ? ಈಗ ನಿನ್ನ ಬಾಣವನ್ನು ನಿನ್ನ ಮೇಲೆಯೇ ಪ್ರಯೋಗಿಸುವಾಗ್ಗೆ ನಿನಗೆ ನೋವಾಗುತ್ತದೆ. ಅಲ್ಲವೇ ? ಮುಂದಕ್ಕೆ ಹೇಳು ನಿನ್ನ ಹೆಸರುಗಳನ್ನು ! ಬಿಡಲಾರೆ ನಿನ್ನನ್ನು !" ಅಂದೆ.

ಸೋನಿಯಾ – ಶೇಖರರು ಗೊಳ್ಳೆಂದು ನಕ್ಕರು.

ಪಶ್ಚಿಮಾಂಬುಧಿಯಲ್ಲಿ ಸೂರ್ಯದೇವನು ಸ್ನಾನಕ್ಕಾಗಿ ಇಳಿಯತೊಡಗಿದ. ಆಗಸವು ರಕ್ತವರ್ಣವನ್ನು ತಾಳಿತು. ಅವನಿಯು ಕಪ್ಪು ಛಾಯೆಯಿಂದ ಆವರಿಸಲ್ಪಡತೊಡಗಿತು

ಶೇಖರನು ಕುಳಿತಲ್ಲಿಂದ ಎದ್ದ. "ಏಳೋಣ, ಕತ್ತಲಾಗುತ್ತ ಬಂತು. ಸಾಕಿನ್ನು ಮಕ್ಕಳಾಟ. ಮನೆಗೆ ಹೋಗೋಣ" ಎಂದ.

ಸೋನಿಯಾ ಕೂಡ ಎದ್ದಳು.

ನಾನೆಂದೆ. "ಇಷ್ಟು ಹೆಸರುಗಳನ್ನು ಹೇಳಿಯಾಯಿತು. ಇವುಗಳಲ್ಲಿ ನೀವು ಯಾವುದನ್ನು ಚುನಾಯಿಸದ್ದೀರೆಂದು ತಿಳಿಯದೆ ನಾನು ಬರುವುದಿಲ್ಲ."

"ನಾನು ಕೂಡಾ ಹಾಗೇನೇ!" ಅಂದಳು ಸೀತಾ

"ಹಾಗೇನು?" ಶೇಖರನೆಂದ "ಹಾಗಾದರೆ ಕೇಳಿ. ಮಗು ಗಂಡಾದರೆ ಅದರ ಹೆಸರು – ಮೋಹನ!"

"ಹೆಣ್ಣಾದರೆ?" ಅಂದು ಪ್ರಶ್ನಿಸಿದಳು ಸೀತಾ.

ನಾಚಿಕೆಯಿಂದ ತಲೆಬಾಗಿಸಿ, "ಕಸ್ತೂರಿ" ಎಂದಳು ಸೋನಿಯಾ.

ಅಹಹ!.. ಮೋಹನದಾಸ ..ಕಸ್ತೂರಿಬಾ!

ನಾನು ಸೀತೆಯತ್ತ ಹೊರಳಿ ಹೇಳಿದೆ. "ಏನಮ್ಮಾ, ನಾವು ಇಷ್ಟು ಜಗಳಾಡಿ, ಪೈಯ ಫಲ ಕೂಡ ಇಲ್ಲ. ನಮ್ಮ ಹೆಸರುಗಳಲ್ಲೊಂದನ್ನೂ ಅವರು ಆರಿಸಿಲ್ಲ. ಅವರ ಹೆಸರುಗಳೇ ಬೇರೆ!" ಅಂದೆ.

"ಅವುಗಳೇ ಚೆನ್ನು!" ಅಂದಳು ಸೀತಾ.

ಮರುದಿನ ಸೋನಿಯಾ ಬಾಣಂತಿತನಕ್ಕೆ ತವರುಮನೆಗೆ ಪ್ರಯಾಣ ಬೆಳಸಿದಳು. ಶೇಖರನು ತನ್ನ ಬಿಡಾರಕ್ಕೆ ಬೀಗ ಹೂಡಿ, ನಮ್ಮ ಮನೆಯಲ್ಲಿಯೇ ವಾಸ್ತವ್ಯ ಮಾಡಿದ.

ಶೇಖರನಿಗೆ ಯಾವುದೋ ಒಂದು ವ್ಯಾಪಾರೀ ಸಂಸ್ಥೆಯಲ್ಲಿ ಕೆಲಸ. ಅಲ್ಲಿ ಕೆಲಸಕ್ಕೆ ಹಾಜರಾಗಿ, ಕೆಲಸಮಾಡುತ್ತಿರುವಷ್ಟು ಕಾಲ ಸುಮ್ಮನೆ ಇರುತ್ತಿದ್ದನೋ ಏನೋ! ಅಂತೂ ಮನೆಯಲ್ಲಿ ಇರುವಾಗ್ಯೆ ಗಳಿಗೆಗೊಮ್ಮೆ ಗಂಟೆ ನೋಡಿಕೊಳ್ಳುವದು, ಇಷ್ಟು ಹೊತ್ತಿಗೆ ಸೋನಿಯಾ ತವರುಮನೆಯಲ್ಲಿ ಏನು ಮಾಡುತ್ತಿರಬಹುದು? ಎಂದು ಪ್ರಶ್ನಾರ್ಥಕ ಚಿನ್ಹೆಯನ್ನು ಹಾಕಿಕೊಂಡು,

ಉತ್ತರವನ್ನು ಅರಸುವದು. ಇಷ್ಟೇ ಕೆಲಸವಾಯಿತು. ಅಲ್ಲದೆ ಪತ್ರವ್ಯವಹಾರ ಬೇರೆ. ಹೊಸದುರ್ಗದಿಂದ ಸೋನಿಯಾಳ ಪತ್ರ ಬಂದಿತೆಂದರೆ ಅದಕ್ಕೆ ಜವಾಬು ಬರೆಯುವ ಸಡಗರವೇನು? ಪೇಟೆಯಿಂದ ಮಧ್ಯಾಹ್ನದ ಊಟಕ್ಕೆಂದು ಬರುವಾಗಲೇ ಒಂದು ರೀಮು ಕಾಗದ ಹಿಡಕೊಂಡು ಬಂದ. ಸೀತಾ ಬಡಿಸಿದಷ್ಟನ್ನು ಗಬಗಬನೆ ಬ್ರಹ್ಮರಾಕ್ಷಸನಂತೆ ತಿಂದ. ಮಾಳಿಗೆಗೆ ಹತ್ತಿ, ನನ್ನ ಮೇಜನ್ನು ಆಕ್ರಮಿಸಿ, ಕುಳಿತನೆಂದರೆ, ಒಂದು ಕಾಗದ ಮುಗಿಯಬೇಕು, ಇಲ್ಲವೆ ಪೆನ್ನಿನೊಳಗಣ ಶಾಯಿ ಮುಗಿಯಬೇಕು, ಅಥವಾ ಪುನಃ ಕೆಲಸಕ್ಕೆ ಹೊರಡುವ ಸಮಯವಾಗಬೇಕು. ಅಷ್ಟಲ್ಲದೆ ಅಲುಗುವಂತಿಲ್ಲ ಸಾಲದ್ದಕ್ಕೆ

ಕಾಳಿದಾಸನ ಮೇಘದೂತದ ನೆನಪಾಯಿತು.

ಆ ದಿನ ನಾನು ಊಟ ತೀರಿಸಿ, ಮಾಳಿಗೆ ಹತ್ತುವಾಗಲೇ ಶೇಖರನು ಮೇಜಿನ ಬಳಿ ಕುಳಿತು, ತಲೆ ತುರಿಸುತ್ತಲಿದ್ದುದನ್ನು ಕಂಡೆ. ನನಗೆ ಮಧ್ಯಾಹ್ನ ಸ್ವಲ್ಪ ನಿದ್ರಿಸುವ ಅಭ್ಯಾಸ ಮಾತೆತ್ತದೆ, ಚಾಪೆ ಬಿಡಿಸಿ, ಬಿದ್ದುಕೊಂಡೆ.

ಥಕ್ಕನೆ ಶೇಖರ ಕೇಳಿದ "ರಾಮೂ, ಹೃದಯೇಶ್ವರೀ ಎಂಬ ಶಬ್ದದೊಂದಿಗೆ ಅಂತಿಮಪ್ರಾಸ ಇರುವ ಬೇರೆ ಶಬ್ದವಿದ್ದರೆ ಹೇಳುವಿಯಾ? ನಿನಗೆ ತಿಳಿದಿದೆಯೇ?"

ಎದ್ದು ಕುಳಿತೆ "ಏಕೆ?" ಎಂದು ಪ್ರಶ್ನಿಸಿದೆ

"ಬೇಕಿತ್ತು ಅಂತಹ ಶಬ್ದಗಳು ನಿನಗೆ ತಿಳಿಯವೇ?"

"ತಿಳಿದಿವೆ."

"ಹಾಗಾದರೆ ಹೇಳು"

"ಕೋಳಿಮುರಿ ಪೋಕರಿ ಚರುಂಬುರಿ ಉಪ್ಪುಕರಿ "

"ಛೆ ಛೆ! ಅವುಗಳಲ್ಲ. ಬೇರೆ ಒಳ್ಳೆಯ ಶಬ್ದಗಳನ್ನು ಹೇಳು"

"ಒಳ್ಳೆಯ ಶಬ್ದವೆಂದರೆ? ಚರುಂಬುರಿ ಉಪ್ಪುಕರಿಯು ಎಷ್ಟು ಒಳ್ಳೆಯ ಶಬ್ದವೆಂದು ಅದನ್ನು ಮಾಡಿ, ತಿಂದವರಿಗೇನೇ ಗೊತ್ತು! ಅಲ್ಲವೋ ಬೆಪ್ಪೆ! ಸಂದರ್ಭ ಏನೆಂಬುದನ್ನು ವಿವರಿಸದೆ, ಪ್ರಾಸ ಹೇಳು ಅಂದರೆ?"

"ಸಂದರ್ಭವೇ?" ಶೇಖರ ತಲೆ ತುರಿಸುತ್ತಾ, ಹೇಳತೊಡಗಿದ "ಕೇಳು.

ಒಬ್ಬ ಮನುಷ್ಯ ತನ್ನ ಹೆಂಡತಿಯನ್ನು ತವರುಮನೆಗೆ ಕಳುಹಿಸುತ್ತಾನೆಂದು ಭಾವಿಸು."

"ಭಾವಿಸಿದೆ. ಹೆರಲಿಕ್ಕೆ ಅಲ್ಲವೇ?" ಅಂದೆ.

"ಯಾವುದಕ್ಕಾದರೇನು? ಅಂತೂ ತವರುಮನೆಗೆ ಕಳುಹಿಸಿದ್ದಾನೆ. ಅವಳ ವಿರಹವ್ಯಥೆಯಿಂದ ಬಳಲಿ, ಬೆಂಡಾದ ಈ ಗಂಡ ತನ್ನ ಹೃದಯವನ್ನು ಬಿಚ್ಚಿ, ಅದರೊಳಗಿನ ಕೋಮಲ ಭಾವನೆಗಳನ್ನು ಒಂದು ಪದ್ಯರೂಪದಲ್ಲಿ ಇಳಿಸಿ, ಕಾಗದದ ಮೇಲೆ ಬರೆದು, ಪೋಸ್ಟುಮ್ಯಾನನನ್ನೇ ತನ್ನ ದೂತನನ್ನಾಗಿ ಮಾಡಿ, ಹೆಂಡತಿಯನ್ನು ಹೃದಯೇಶ್ವರೀ – ಎಂದು ಸಂಬೋಧಿಸುತ್ತಾನೆ."

" ಅಂದರೆ ನೀನು ನಿನ್ನ ಹೆಂಡತಿ ಸೋನಿಯಾಗೆ ಪತ್ರ ಬರೆಯುತ್ತಾ ಇದ್ದೀ–ಎಂಬ ಅರ್ಥವಲ್ಲವೇ? ಅಷ್ಟನ್ನು ನೇರವಾಗಿ ಹೇಳದೆ, ಒಂದಾನೊಂದು ಕಾಲದಲ್ಲಿ ಒಂದಾನೊಂದು ಊರಿನಲ್ಲಿ ಎಂಬಂತೆ ಸುತ್ತುಗಟ್ಟಬೇಕೇ?"

"ಅದಿರಲಿ, ಪ್ರಾಸಬದ್ಧವಾದ ಶಬ್ದ ಹೇಳು"

"ಹೃದಯೇಶ್ವರೀ – ಅಲ್ಲವೇ? " ಕೊಂಚ ಹೊತ್ತು ಯೋಚಿಸಿ ಕೊಂಡು, ". ಹೃದಯೇಶ್ವರೀ ಹೃತ್‌ಚಕೋರಿ. ಮಮ ಪ್ರಾಣೇಶ್ವರೀ...."

ಶೇಖರ ತಡೆದ. "ಹಾಂ, ಸಾಕು ಹೃತ್‌ಚಕೋರಿ ಅಲ್ಲವೇ? ಸರಿ, ಇನ್ನು ನೀನು ಮಲಗು"

ನಾನು ಕೇಳಿದೆ. "ಏನು? ಸೋನಿಯಾಳ ಕಾಗದ ಬಂತೇ ಈ ದಿನ?"

"ಹೂಂ, ಆರೋಗ್ಯವಾಗಿದ್ದಾಳಂತೆ ರಾಮೂ, ನಾನು ಈ ದಿನ ಒಬ್ಬ ಹಸ್ತಸಾಮುದ್ರಿಕದವನಿಗೆ ನನ್ನ ಕೈ ತೋರಿಸಿದೆ ಅವನು ಹೇಳಿದ್ದಾನೆ – ನನ್ನ ಹಸ್ತರೇಖೆಗಳ ಪ್ರಮಾಣದಿಂದ ನನಗೆ ಖಂಡಿತವಾಗಿಯೂ ಗಂಡುಮಗುವೇ ಆಗುವುದಂತೆ. ಅಲ್ಲವಾದರೆ ಅವನ ಸಾಮುದ್ರಿಕ ಶಾಸ್ತ್ರವೇ ಸುಳ್ಳಾಗಬೇಕಂತೆ."

"ಅವನ ಸಾಮುದ್ರಿಕ ಶಾಸ್ತ್ರ ಸುಳ್ಳಾಗಿ, ನಿನಗೇನೂ ಫಲವಿಲ್ಲ. ಗಂಡು ಮಗುವಾದರೆ ನಿನಗೆ ಗಂಡುಮಗು ಲಾಭ, ನಮಗೆ ಎರಡು ಮಿಠಾಯಿ ಲಾಭ!" ಅಂದೆ

"ಎರಡಲ್ಲ, ಮಣಗಟ್ಟಲೆ! ನಿನ್ನನ್ನು ಮಿಠಾಯಿಯಲ್ಲೇ ಮುಳುಗಿಸು ತ್ತೇನೆ" ಅಂದ ಶೇಖರ.

"ತಥಾಸ್ತು!" ಅನ್ನುವಾಗ ಬಾಯಲ್ಲಿ ನೀರೂರಿತ್ತು.

# ಭವಿಷ್ಯತ್

ಅಂಗಿಯನ್ನು ತೊಟ್ಟು, ಮಾಳಿಗೆಯನ್ನು ಇಳಿದು, ಚಾವಡಿಗೆ ಕಾಲಿಟ್ಟೆ. ಶೇಖರ ಟೆಲಿಗ್ರಾಮು ಇಸಕೊಂಡು, ರಶೀದಿಗೆ ದಸ್ಕತ್ತು ಹಾಕುತ್ತಿದ್ದ.

ಸೀತಾ ಕೇಳಿದಳು. " ಶೇಖರಣ್ಣ , ಹೊಸದುರ್ಗದಿಂದಲೇ ?"

" ಹೂಂ " ಅಂದಂದು ಶೇಖರ ಲಕೋಟೆಯನ್ನು ಒಡೆಯತೊಡಗಿದ.

ಹೊರಡುವ ಯೋಚನೆಯಲ್ಲಿದ್ದ ಟೆಲಿಗ್ರಾಫ್ ಪೇದೆಗೆ " ಸಿಲ್ಲು, ಇನಾಮು ಸಿಗುವ ಸಂಭವವಿದೆ " ಅಂದೆ

ಶೇಖರ ಲಕೋಟೆಯನ್ನು ಒಡೆದು, ಟೆಲಿಗ್ರಾಮನ್ನು ಬಿಡಿಸಿ ಓದತೊಡಗಿದ.

" ಶೇಖರಣ್ಣ, ಏನು ? ಕಸ್ತೂರಿಯೇ ?" ಅಂದಳು ಸೀತಾ.

" ಶೇಖರ, ಏನು ? ಮೋಹನನೇ ?" ಅಂದೆ ನಾನು

" ರಾಯರೇ, ಇನಾಮು ?" ಅಂದ ಪೇದೆ.

ಆದರೆ ಆದರೆ

ಶೇಖರ ತಟಸ್ಥನಾಗಿದ್ದಾನೆ ಕೈಯಿಂದ ಟೆಲಿಗ್ರಾಮು ಜಾರಿ, ನೆಲಕ್ಕೆ ಬಿದ್ದಿದೆ. ನಾವು ಕಣ್ಣಿಗೆ ಕಾಣಿಸದಷ್ಟು–ನಮ್ಮ ಮಾತುಗಳು ಕಿವಿಗೆ ಕೇಳದಷ್ಟು– ದೂರ ಹೋಗಿದ್ದಾನೆ ಶೇಖರ. ಬಾಹ್ಯ ಜಗತ್ತು ಅವನ ಪಾಲಿಗೆ ಶೂನ್ಯ ವಾಗಿದೆ. ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿದೆ.

" ಶೇಖರಣ್ಣಾ !" ಎಂದು ಕೂಗಿದಳು ಸೀತಾ

ನಾನು ನೆಲದ ಮೇಲೆ ಬಿದ್ದಿದ್ದ ಟೆಲಿಗ್ರಾಮನ್ನೆತ್ತಿ ಓದಿದೆ.

ಅದರಲ್ಲಿತ್ತು —

" Sonia delivered morning Mother O K Child still-born "

("ಸೋನಿಯಾ ಬೆಳಿಗ್ಯೆ ಹೆತ್ತಳು. ತಾಯಿ ಸೌಖ್ಯ. ಮಗು ಮೃತಗರ್ಭ.")

ಏನು ವಿಧಿಯ ವೈಚಿತ್ರ್ಯ ?

# ತವರುಮನೆ ಬೇಕೇ ?

ಉಡುಪಿ.

ತಾ. ೨೩-೫-೪೧

ಪೂಜ್ಯ ಪ್ರಾಣಪತಿಗಳ ಸನ್ನಿಧಾನಕ್ಕೆ—

ಬಾಲಕಿಯು ವಂದಿಸಿ, ಬೇಡಿಕೊಳ್ಳುವ ಆಶೀರ್ವಾದ—

ಇಲ್ಲಿ ನಾವೆಲ್ಲರೂ ಕ್ಷೇಮ ತಮ್ಮ ಕ್ಷೇಮಕ್ಕೆ ಆಗಿಂದಾಗ್ಯೆ ಪತ್ರ ಬರೆಯುತ್ತಿರಬೇಕಾಗಿ ಬೇಡಿಕೊಳ್ಳುತ್ತೇನೆ ಸಾಂಪ್ರತ. ನನ್ನ ತಂದೆಯವರಿಗೆ ಮಾತ್ರ ಸ್ವಲ್ಪ ವಾತದ ಬೇನೆ ಹಿಡಿದಿದೆ. ಈಗ ಸ್ವಲ್ಪ ಗುಣಾಂಶವುಂಟು. ನಾನು ಇಲ್ಲಿಗೆ ಬಂದು ತಿಂಗಳೆರಡು ಕಳೆದುಹೋದರೂ ಅಲ್ಲಿಗೆ ವಾಪಸು ಬರದಿದ್ದುದನ್ನು ಕಂಡು, ತಮಗೆ ಬಹಳ ಬೇಸರವಾಗಿರಬಹುದು. ಇಲ್ಲಿ ಅಮ್ಮನವರು ಒಬ್ಬರೇ ಇದ್ದಾರೆ. ಕಮಲಕ್ಕ, ತುಂಗಕ್ಕ ಎಲ್ಲಾ ಅವರವರ ಗಂಡನ ಮನೆಗಳಿಗೆ ಹೋಗಿರುತ್ತಾರೆ. ಆದುದರಿಂದ ಅಮ್ಮನವರಿಂದ - ಪಾಪ, ಅವರಿಗೂ ಪ್ರಾಯ ಕಳೆದು ಹೋಗಿದೆ! – ಮನೆಯ ಕೆಲಸಗಳೆಲ್ಲಾ ಸುಧಾರಿಸುವುದು, ಕಷ್ಟವಾದೀತೆಂದು ನೆನಸಿ, ನಾನು ಇನ್ನೂ ನಾಲ್ಕು ತಿಂಗಳು ಇಲ್ಲೇ ನಿಲ್ಲುವ ಆಲೋಚನೆ ಮಾಡಿದ್ದೇನೆ. ಆಗೋಸ್ತು ತಿಂಗಳ ಆಖೈರಿಗೆ ಅಥವಾ ಸಪ್ಟಂಬರ ತಿಂಗಳ ಆರಂಭಕ್ಕೆ ಕಮಲಕ್ಕ ಇಲ್ಲಗೆ ಬರುತ್ತೇನೆಂದು ಹೇಳಿದ್ದಾರೆ. ಅವರು

ಬಂದ ಕೂಡಲೇ ನಾನು ಮನೆಗೆ ಹೊರಟು ಬಂದು ಬಿಡುತ್ತೇನೆ. ಇಷ್ಟು ದಿನಗಳು ಕಾಗದ ಬರೆಯದೆ ಇದ್ದುದಕ್ಕೆ ಕ್ಷಮಿಸಬೇಕಾಗಿ ಬೇಡಿಕೊಳ್ಳುತ್ತೇನೆ.

ಇಂತಿ ಬೇಡಿಕೊಳ್ಳುವ ಆಶೀರ್ವಾದ,
'ಸೀತಾದೇವಿ'

ತಾ. ತ :—ಅರವಿಂದ ಭಾವಯ್ಯನವರಿಗೆ ನನ್ನ ನಮಸ್ಕಾರಗಳನ್ನು ಹೇಳಿರಿ. ಆಫೀಸಿನಲ್ಲಿ ಹೆಚ್ಚು ಹೊತ್ತು ಕುಳಿತು, ಕೆಲಸ ಮಾಡಿ, ತಲೆ ಹಾಳು ಮಾಡಿಕೊಳ್ಳಬೇಡಿ. ಬೇಗನೆ ಮನೆಗೆ ಹೋಗಿ, ವಿಶ್ರಾಂತಿ ತೆಗೆದುಕೊಳ್ಳಿ. ನಾಲ್ಕು ದಿನಗಳಿಗೊಮ್ಮೆ ಎಣ್ಣೆ ಸ್ನಾನ ಮರೀಬೇಡಿ 'ಬ್ರಾಹ್ಮೀತೈಲ' ಅಡಿಗೆ ಮನೆಯೊಳಗೆ ಕಾಫೀ ಡಬ್ಬಿಯ ಹತ್ತಿರವಿದೆ.

ಇಂತಿ – 'ಸೀತಾ'

೨

ಮಂಗಳೂರು.
ತಾ. ೨೯–೫–೪೧

ಪ್ರೀತಿಯ ಸೀತಾದೇವಿಗೆ – ಸಪ್ರೇಮ ಆಶೀರ್ವಾದಗಳು.

ನೀನು ಇಲ್ಲಿಂದ ಹೋದಂದಿನಿಂದ ಒಂದೊಂದು ದಿನವೆಂದರೆ ಒಂದೊಂದು ಯುಗವಾಗಿ ಕಾಣಿಸುತ್ತಿದೆ ನನಗೆ. ಕಳೆದ ಸಲ ನೀನು ತವರುಮನೆಗೆ ಹೋದವಳು ಮೂರು ತಿಂಗಳು ಅಲ್ಲಿದ್ದು ಫೆಬ್ರವರಿಯಲ್ಲಿ ವಾಪಸು ಬಂದಿ. ಅನಂತರ ಇಡೀ ಒಂದು ತಿಂಗಳು ಕಳೆಯಬೇಕಾದರೆ ಪುನಃ 'ನನ್ನ ತಮ್ಮ ನಾಣಿಗೆ ಉಪನಯನ' ಅಂತ ಮಾರ್ಚಿಯಲ್ಲಿ ಹೋದವಳು ಇನ್ನು ಸಪ್ಟಂಬರಿನಲ್ಲಿ ಬರುತ್ತೇನೆಂತ ಬರೆದಿದ್ದಿ, ಏನಿದು ? ನನಗಿಂತ ನಿನಗೆ ತವರುಮನೆಯೇ ಹೆಚ್ಚು ಪ್ರೀತಿಯದಾಯಿತೇನು ?

ಸೀತಾ, ನನ್ನ ರಾಣೀ, ನೀನು ಇಲ್ಲಿಲ್ಲದೆ ನನಗೆ ರಾತ್ರಿ ನಿದ್ದೆ ಸಹ ಹತ್ತುವುದಿಲ್ಲ ಎಲ್ಲಾದರೂ ಸ್ವಲ್ಪ ಕಣ್ಣಿಗೆ ಜೊಂಪು ಹಿಡಿದರೆ ನಿನ್ನ ಕನಸೆ ಬೀಳುತ್ತದೆ. ಮೊನ್ನೆ ರಾತ್ರೆ ನಿದ್ದೆಯಲ್ಲಿ ಏನೋ 'ಬಾರೇ ಸೀತಾ, ಹೊತ್ತಾ

ಯಿತು ಹಾಸಿಗೆ ಹಾಸಿದಿಯೇನು ?' ಅಂತ ಹೇಳಿದೆ ಅಂತೆ. ಅರವಿಂದ ಇವತ್ತಿಗೂ ಅದನ್ನು ಹೇಳಿ, ನನಗೆ ತಮಾಷೆ ಮಾಡುತ್ತಲೇ ಇದ್ದಾನೆ. ಆಫೀಸಿಗೆ ಹೋಗಿ, ಲೆಕ್ಕಪತ್ರ ಬರೆಯುವಾಗಲೂ ನಿನ್ನ ನೆನಪೇ ಆಗಿ, ದೂಮಣ್ಣ ಶೆಟ್ಟರ ಲೆಕ್ಕ ರಾಮ ನಾಯ್ಕರ ಹೆಸರಿಗೂ, ಕಾತ್ರೀನಾ ಬಾಯಿಯ ಲೆಕ್ಕ ರುಕ್ಕು ಹೆಂಗಸಿನ ಹೆಸರಿಗೂ, ಬರೆದುಬಿಡುವಷ್ಟು ನಿನ್ನ ಧ್ಯಾನವಾಗಿ ಹೋಗಿದೆ ಅಲ್ಲದೆ ನೀನು ತಾಯಿ ಮನೆಗೆ ಹೋದಂದಿನಿಂದ ನನಗೆ ಹೊಟ್ಟೆಯಲ್ಲೇನೂ ಸ್ವಸ್ಥವಿಲ್ಲ. ಯಾಕೋ ಏನೊ ? ಅನ್ನವೆಂದರೆ ಎರಡು ತುತ್ತು ರುಚಿಸುವುದಿಲ್ಲ ಪ್ರತಿ ದಿವಸ ಎರಡು ಅಧ್ಯಾಯ ಭಗವದ್ಗೀತೆ ಓದುತ್ತಿದ್ದೆ, ಅಲ್ಲ, ನಾನು ಈಗ ಓದೋದನ್ನೇ ಬಿಟ್ಟಿದ್ದೇನೆ. ಅರವಿಂದ ಹೇಳುತ್ತಾನೆ, 'ಏನಣ್ಣಾ ? ಅತ್ತಿಗೆ ಹತ್ತಿರ ಇರುವಾಗ ಯೋಗಿಯಾಗುವ ಇಚ್ಛೆ, ಅತ್ತಿಗೆ ಇಲ್ಲದಿರುವಾಗ ಭೋಗಿಯಾಗ್ತೀಯಾ ?' ಅಂತ. ಮೊನ್ನೆ ನಿದ್ದೆ ಬರೋಲ್ಲಾಂತ 'ವಿದ್ಯಾಪತಿ' ಫಿಲ್ಮಿಗೆ ಹೋಗಿದ್ದೆ. ಕಳೆದಸಲ ನಾನೂ ನೀನೂ ನೋಡಿದಾಗ ಎಷ್ಟು ಚೆನ್ನಾಗಿ ಕಂಡಿತ್ತು ? ಮೊನ್ನೆ ಅರ್ಧದಲ್ಲಿಯೇ ವಾಪಸು ಬಂದೆ, ಏನೂ ಚೆನ್ನಾಗಿ ತೋರಲಿಲ್ಲ 'ವಿದ್ಯಾಪತಿ'ಯ ಪೌರೋಹಿತ್ಯದಲ್ಲಿ ರಾಜಾ ಶಿವಸಿಂಗನು ತನ್ನ ರಾಣಿಯ ಪ್ರೇಮ ಪೂಜೆಯನ್ನು ಮಾಡುವ ದೃಶ್ಯ ಬಂದಾಗ, ನಾನು ಮೆಲ್ಲನೆ ಅರವಿಂದನ ಹೆಗಲ ಮೇಲೆ ಕೈಯಿಟ್ಟೆ ಅಂತೆ ಈ ರೀತಿ ನೀನಿಲ್ಲದೆ ನನ್ನ ಅವಸ್ಥೆಯಾಗಿ ಹೋಗಿದೆ. ಆದ್ದರಿಂದ ಹೇಗಾದರೂ ಮಾಡಿ, ಆದಷ್ಟು ಬೇಗನೆ ಬಂದುಬಿಡುವ ಕೃಪೆಮಾಡು.

ಅರವಿಂದ ಸೌಖ್ಯವಾಗಿದ್ದಾನೆ. ಮೊನ್ನೆ ಶಾಲಾ ಸಂಗೀತ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಸಿಕ್ಕಿದೆ "ಇದು ಅತ್ತಿಗೆ ನನಗೆ ಹಾಡು ಕಲಿಸಿದ್ದರ ಫಲ" ಅನ್ನುತ್ತಿದ್ದಾನೆ. ಬಾಕಿ ಏನೂ ವಿಶೇಷ ಇಲ್ಲ.

ಇಂತಿ, ನಿನ್ನ ಬರವನ್ನೇ ನಿರೀಕ್ಷಿಸುತ್ತಿರುವ

'ರಾಮು'

೩

ಉಡುಪಿ
ತಾ. ೧-೬-೪೧

ಪ್ರಿಯ ಪತಿಗಳ ಚರಣಾರವಿಂದಗಳಿಗೆ—

ಬಾಲಕಿಯ ಸಾಷ್ಟಾಂಗ ವಂದನೆಗಳು.

ತಾವು ಬರೆದ ತಾ. ೨೯ ರ ಪತ್ರವು ನಿನ್ನೆ ನನಗೆ ಸಿಕ್ಕಿತು ನನ್ನ ಮೇಲಿನ ತಮ್ಮ ಅಭಿಮಾನವನ್ನು ಕಂಡು, ನನಗೆ ಬಹಳ ಸಂತೋಷವಾಯಿತು. ತಾವೂ ಅರವಿಂದ ಭಾವಯ್ಯನವರೂ ಕ್ಷೇಮವಾಗಿದ್ದೀರೆಂದು ಓದಿ, ಮನಸ್ಸಿಗೆ ನೆಮ್ಮದಿಯಾಯಿತು. ನಾನು ಉಡುಪಿಗೆ ಬಂದಾಗ, ತಮ್ಮ ಆರೈಕೆ ನೋಡುವವರಿಲ್ಲದೆ, ತಾವು ಬಹಳ ಕಷ್ಟಪಡುವಿರೆಂದು ಚಿಂತಿಸುತ್ತಿದ್ದೆ. ಆದರೂ ತಾವು ಸುಖವಾಗಿರುವಿರೆಂದು ತಿಳಿದು ಬಹಳ ಆನಂದವಾಗಿದೆ. ನನಗೂ ತಮ್ಮನ್ನು ಅಗಲಿ, ಇಲ್ಲಿ ಹೊತ್ತೇ ಹೋಗುವುದಿಲ್ಲ ಎದ್ದಾಗ ಕೂತಾಗ, ತಮ್ಮ ನೆನಪೇ ಆಗುತ್ತಿದೆ. ಬೇಗನೆ ಮನೆಗೆ ಹೊರಟುಬಿಡೋಣ ಎನ್ನಿಸುತ್ತದೆ. ಆದರೆ ಏನು ಮಾಡಲಿ ? ಇಲ್ಲಿ ಮೊನ್ನೆ ಶುಕ್ರವಾರದಿಂದ ಅಮ್ಮನವರಿಗೆ ಸ್ವಲ್ಪ ಜ್ವರ ಆರಂಭವಾಗಿದೆ. ವಿಶೇಷವೇನಿಲ್ಲ. ಸ್ವಲ್ಪ ಶೀತವಾಗಿದೆ ಅಷ್ಟೆ ಅಂತ ಕಾಣಿಸುತ್ತಿದೆ. ಮೊನ್ನೆ ಅಮಾವಾಸ್ಯೆ ದಿನ ಸಮುದ್ರ ಸ್ನಾನಮಾಡಿ ಬಂದರು. ಆದ್ದರಿಂದ ಹೀಗೆ ಜ್ವರ ಬರುತ್ತೆ ಅಂತ ಕಾಣುತ್ತದೆ. ಮೊನ್ನೆ ಆದಿತ್ಯವಾರ ಮೈಸೂರಿನಿಂದ ವಿಮಲಾ ಚಿಕ್ಕಮ್ಮನವರು ಮಕ್ಕಳೊಂದಿಗೆ ಇಲ್ಲಿಗೆ ಬಂದಿದ್ದಾರೆ. ಹಾಗಾಗಿ ಅಮ್ಮನವರು ಹುಷಾರಾಗುವವರೆಗೂ – ಚಿಕ್ಕಮ್ಮನವರು ಮೈಸೂರಿಗೆ ಹಿಂತೆರಳುವವರೆಗೂ ಮನೆಗೆ ಬರುವುದು ಅಸಾಧ್ಯವಾಗಿದೆ. ಆದಷ್ಟು ಬೇಗನೆ ಮನೆಗೆ ಬರುತ್ತೇನೆ.

ತಮಗೆ ಮೈಯಲ್ಲಿ ಸ್ವಸ್ತವಿಲ್ಲವೆಂಬುದನ್ನು ಓದಿ, ಬಹಳ ವ್ಯಥೆಯಾಗಿದೆ. ಬಹುಶಃ ತಾವು ಆಫೀಸಿನಲ್ಲಿ ಹೆಚ್ಚು ಹೊತ್ತು ಕೆಲಸ ಮಾಡುತ್ತೀರೆಂದು ಕಾಣಿಸುತ್ತಿದೆ ಹಾಗೆ ಆರೋಗ್ಯವನ್ನು ಕೆಡಿಸಿಕೊಂಡು, ಕೆಲಸದಲ್ಲಿಯೇ ಮನಸ್ಸಿಡಬೇಡಿ. ಅಲ್ಲದೆ ಹೋಟೆಲಿನಿಂದ ಅನ್ನ ತರಿಸುತ್ತೀರೇನೋ ಊಟಕ್ಕೆ ? ನಾನು ಮೊದಲೇ ಹೇಳಿದ್ದೆ ! ಸಾರೇನೂ ಅಷ್ಟು ಚೆನ್ನಾಗಿರುವುದಿಲ್ಲ. ಉಂಡ

ಕೂಡಲೇ ನನಗೂ ಒಮ್ಮೆ ಹಸಿವೆಯೇ ಇಲ್ಲದ ಹಾಗೆ ಆಗಿತ್ತು. ನಾಳಿನಿಂದ ಕೃಷ್ಣಾಚಾರ್ಯರ ಹೋಟೆಲಿನಿಂದ ಊಟ ತರಿಸಿ, ಅವರು ಸಾರು ಚೆನ್ನಾಗಿ ಮಾಡುತ್ತಾರೆ ಪಾಪ, ನಾನಿಲ್ಲದೆ ಎಷ್ಟು ಕಷ್ಟ ನಿಮಗೆ?? ಇಲ್ಲಿ ಅಮ್ಮ ಹುಷಾರಾದ ಕೂಡಲೇ ನಾನು ಹೊರಟು ಬರುತ್ತೇನೆ

ಇಂತಿ, ಬೇಡಿಕೊಳ್ಳುವ ಆಶೀರ್ವಾದಗಳು.

'ಸೀತಾದೇವಿ'

ವಿ. ಸೂ:—ಮೊನ್ನೆ ಶನಿವಾರ ಎಣ್ಣೆಸ್ನಾನ ಮಾಡಿದ್ದಿರಾ? ನೆರಮನೆ ಪದ್ಮಾವತಿ ಅಮ್ಮನವರ ದನ ಕರು ಹಾಕಿತೇ? ಮೇಲ್ಮನೆ ನಾಗಮ್ಮನವರ ಮಗಳು ಆಸ್ಪತ್ರೆಯಲ್ಲಿ ಹೆತ್ತಳು ಅಂತ ಕೇಳಿದೆ. ಮಗು ಗಂಡೋ ಹೆಣ್ಣೋ? ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಿ.

ಇಂತಿ, 'ಸೀತಾ'

೪

ಅರವಿಂದನ ಡೈರಿ – ಬುಧವಾರ ತಾ. ೧೫–೬–೪೧.

'ಏನೋ ಈಚೀಚೆಗೆ ಅಣ್ಣನಿಗೆ ಬಹಳ ಬೇಸರ ಹಿಡಿದುಬಿಟ್ಟಿದೆ ನಾನು ಹದಿನಾರು ಸಲ ಮಾತನಾಡಿಸಿದರೂ ಒಮ್ಮೆಯಾದರೂ ಮಾತನಾಡುವುದಿಲ್ಲ. ಸರಿಯಾಗಿ ಊಟವನ್ನು ಸಹಿತ ಮಾಡುವುದಿಲ್ಲ. ಕೇಳಿದರೆ 'ಹೋಗೋ, ನನಗೆ ಹಸಿವಿಲ್ಲ. ನೀನೇ ಊಟಮಾಡು' ಎನ್ನುತ್ತಾನೆ ಅತ್ತಿಗೆಯ ಸುದ್ದಿ ಎತ್ತಿದ ಕೂಡಲೇ ಕೋಪದಿಂದ ಉರಿದು, ನನ್ನನ್ನೇ ನುಂಗ ಬರುತ್ತಾನೆ ಮೊನ್ನೆ ಅತ್ತಿಗೆಯ ಒಂದು ಕಾಗದ ಬಂದಿತ್ತು. ಅದನ್ನು ಓದಿ, ವಿಕಟವಾಗಿ ಒಮ್ಮೆ ನಕ್ಕು, ಬೆಂಕಿಗೆ ಹಾಕಿಬಿಟ್ಟಿದ್ದಾನೆ 'ಏನಣ್ಣಾ ವಿಶೇಷ?' ಎಂತ ಕೇಳಿದೆ. ಅವ ಕೋಪದಿಂದ 'ವಿಶೇಷ? ಮದುವೆಯಾದ ಮೊದಲನೇ ವರ್ಷದಲ್ಲೇ ಹನ್ನೊಂದು ತಿಂಗಳು ತಾಯಿಮನೆಯಲ್ಲಿ - ಒಂದು ತಿಂಗಳು ಗಂಡನ ಮನೆಯಲ್ಲಿ ಕಳೆದರೆ – ನನಗೆ ಹೆಂಡತಿ ಯಾಕೆ? ನಿನಗೆ ಅತ್ತಿಗೆ ಯಾಕೆ?' ಅಂದ. ಇವತ್ತು ಬೆಳಿಗ್ಗೆ 'ಅಣ್ಣಾ, ಅತ್ತಿಗೆ ಯಾವಾಗ ಬರುತ್ತಾಳಂತೆ?' ಅಂತ ಕೇಳಿದ್ದಕ್ಕೆ, ಅಣ್ಣ ಕೋಪದಿಂದ ಸಿಡಿಮಿಡಿಗುಟ್ಟಿ, 'ಬರುತ್ತಾಳಂತೆ ನಾಡಿದ್ದು – ಹುಣ್ಣಿಮೆ,

ಅಮಾವಾಸ್ಯೆ, ಸಂಕ್ರಾಂತಿ ಇವು ಮೂರು ಒಂದೇ ದಿವಸ ಬಂದ ದಿನ! ಅವಳ ತಾಯಿದ ಶೀತ ಹೋಗಿ, ಉಷ್ಣವಾದ ದಿನ!! ಅವಳ ವಿಮಲಾ ಚಿಕ್ಕಮ್ಮ ನವರನ್ನು ದಕ್ಷಿಣ ಕನ್ನಡ ಜಿಲ್ಲೆಯಿಂದ ಗಡೀಪಾರು ಮಾಡಿದ ದಿನ!!!' ಅಂದ. ಅಂತೂ ನನಗೇನೋ ವಿಚಿತ್ರವಾಗಿ ಕಾಣಿಸುತ್ತದೆ. ಇದಕ್ಕೆ ಏನಾದರೊಂದು ಮದ್ದು ಅರೆಯದೆ ಉಪಾಯವಿಲ್ಲ.'

೫

ಮಂಗಳೂರು,
ತಾ. ೧೬-೬-೪೧

ಮಾತೋಶ್ರೀ ಸಮಾನರಾದ ಅತ್ತಿಗೆಯವರಿಗೆ—

ಬಾಲಕನ ಸಾ. ನಮುಸ್ಕಾರಗಳು.

ಇಲ್ಲಿ ನಾವಿಬ್ಬರೂ ಕ್ಷೇಮ. ತಮ್ಮ ಕ್ಷೇಮಕ್ಕೆ ಆಗಿಂದಾಗ ಪತ್ರ ಬರೆಯ ಬೇಕಾಗಿ ಬೇಡಿಕೊಳ್ಳುತ್ತೇನೆ. ಸ್ಸಾಂಪ್ರತ – ಈ ಪತ್ರ ಬರೆಯಲು ಕಾರಣ ವೇನೆಂದರೆ – ಈಚೀಚೆಗೆ ಅಣ್ಣಯ್ಯನವರು ಬಹಳ ವಿಪರೀತವಾಗಿ ವರ್ತಿಸ ಹತ್ತಿದ್ದಾರೆ ಮನೆಯಲ್ಲಿ ಇರುವಾಗ ಯಾವಾಗಲೂ 'ತೂನೆ ಮುಝುಕೋ ಪ್ರೇಮಸಿಖಾಯಾ' ಅಂತ ಹಾಡುತ್ತಲೇ ಇದ್ದಾರೆ ಮನೆಯ ಗೋಡೆಗೋಡೆ ಗಳಿಗೆ ಸಬಿತಾದೇವಿ, ನಾಸಿಮ್, ಕನ್ನನ್‌ಬಾಲಾ, ಛಾಯಾದೇವಿ, ದೇವಿಕಾರಾಣಿ ಮುಂತಾದ ಸಿನಿಮಾ ನಟಿಯರ ಚಿತ್ರಗಳನ್ನು ಅಂಟಿಸಿ, ಈಗ ನನ್ನ ಅಂಗಿಯನ್ನು ತೂಗ ಹಾಕಲು, ಒಂದು ಗೂಟ ಹೊಡೆಯಲು ಸಹ ಜಾಗವಿಲ್ಲದಂತೆ ಮಾಡಿದ್ದಾರೆ ಮೊನ್ನೆ ಸಾಯಂಕಾಲ ನಾನು ಶಾಲೆಯಿಂದ ಮನೆಗೆ ಬಂದಾಗ, ಕೋಣೆಯಲ್ಲಿ ಕುರ್ಚಿಯ ಮೇಲೆ ಕೂತು ಕಾಲುಗಳನ್ನು ಮೇಜಿನ ಮೇಲಿಟ್ಟು, ಕೈಯಲ್ಲಿ ಯಾವ ಸುಟ್ಟ ಹೆಂಗಸಿನದ್ದೋ ಒಂದು ಫೋಟೋ ಹಿಡಕೊಂಡು, 'ತುಮ್ ಹೋ ಮೇರೆ ಸಂಗ್, ಆಶಾ ಹೈ ಮೇರೆ ಸಂಗ್!' ಅಂತ ಹಾಡು ತ್ತಿದ್ದರು. ಏನು ಗ್ರಹಚಾರವೋ, ಯಾವಾಗಲೂ ಮಧ್ಯಾಹ್ನ ಊಟಕ್ಕೆ ಬಂದವರು ಒಂದೆರಡು ಗಂಟೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಈಗ ಅದೊಂದೂ ಇಲ್ಲ. ಊಟವಾಗಿ, ತೊಳೆದ ಕೈಯ ನೀರು ಒಣಗಬೇಕಾದರೆ ಅಣ್ಣಯ್ಯ ಮನೆಯಿಂದ

ಹೊರಗೆ! ಈಗ ರಾತ್ರಿ ಮನೆಗೆ ಬರುವಾಗ ಯಾವಾಗಲೂ ಹನ್ನೆರಡರ ಮೇಲೆ ಒಂದು ಆಗುತ್ತದೆ 'ಏನಣ್ಣಾ ಹೊತ್ತು?' ಎಂತ ಕೇಳಿದರೆ, 'ಸಿನೆಮಾಕ್ಕೆ ಹೋಗಿದ್ದೆ' ಅಂತಾರೆ ಅತ್ತಿಗೆ, ಪೂರಾ ಸುಳ್ಳು! ಮೊನ್ನೆ ಒಂದು ಇಂಗ್ಲಿಷ್ ಸಿನೆಮಾಕ್ಕೆ ಹೋಗಿದ್ದೆ ಅಂದಿದ್ದರು ಸಿನೆಮಾ ಹನ್ನೊಂದೂವರೆ ಗಂಟೆಗೆ ಮುಗಿದರೂ ಅಣ್ಣ ಮನೆಗೆ ಬರುವಾಗ ಒಂದೂವರೆ ತಾಸಾಗಿತ್ತು! ಅಲ್ಲದೆ ಈಗೀಗ ಅಣ್ಣಯ್ಯನವರ ಮುಖವನ್ನು ನೋಡುವಾಗಲೂ ಬಹಳ ಭಯವಾಗುತ್ತದೆ. ನಿನ್ನೆ 'ಅಣ್ಣ. ಅತ್ತಿಗೆಗೆ ಬೇಗನೆ ಬರಲು ಕಾಗದ ಬರೆಯಲೋ?' ಅಂತ ಕೇಳಿದ್ದಕ್ಕೆ ಅಣ್ಣ 'ಜಾಗ್ರತೆ, ಕಾಗದ ಬೇಕಾದರೆ ಬರಿ ಆದರೆ ಬೇಗ ಮನೆಗೆ ಬರಲಿಕ್ಕೆ ಬರೆದರೆ, ನಿನ್ನ ತಲೆ ಎರಡು ಭಾಗ ಮಾಡಿಯೇನು! ಇಲ್ಲಿ ನಾನು ಸೌಖ್ಯವಾಗಿದ್ದೇನೆ. ಹೋಟೆಲಿನ ಅನ್ನ ಬಹಳ ರುಚಿಸುತ್ತದೆ ನೀನು ಇನ್ನೂ ಏಳೆಂಟು ತಿಂಗಳು ಅಲ್ಲೇ ಇದ್ದು ಬರಬಹುದು ಅಂತ ಕಾಗದ ಬರಿ' ಅಂದಿದ್ದಾರೆ. ಅತ್ತಿಗೆ, ನನಗೇಕೋ ಇದು ಭಯಂಕರವಾಗಿ ಕಾಣಿಸುತ್ತಿದೆ. ಅತ್ತಿಗೆ, ನಾನೇನು ಮಾಡಲಿ? ತಾವು ಬೇಗನೆ ಇತ್ತ ಬರಬೇಕೆಂದು ನಾನು ಹೇಳುವುದಿಲ್ಲ, ಅಣ್ಣಯ್ಯ ತಲೆಯನ್ನು ಒಡೆದಾರು! ಆದರೂ

ಇಂತಿ ಬೇಡಿಕೊಳ್ಳುವ ಆಶೀರ್ವಾದ

'ಅರವಿಂದ'

೬

ಉಡುಪಿ,

ತಾ. ೧೭–೬–೪೧.

ಪ್ರಿಯ ಪತಿಗಳ ಸನ್ನಿಧಾನಕ್ಕೆ—

ಬೇಡಿಕೊಳ್ಳುವ ಆಶೀರ್ವಾದಗಳು.

ಇಲ್ಲಿ ಅಮ್ಮನವರು ಸೌಖ್ಯವಾಗಿದ್ದಾರೆ. ವಿಮಲಾ ಚಿಕ್ಕಮ್ಮನವರು ಇನ್ನು ಒಂದು ತಿಂಗಳು ಇಲ್ಲೇ ಇರುತ್ತಾರಂತೆ. ಆದ್ದರಿಂದ ನಾನು ನಾಳೆ ಬೆಳಿಗ್ಗೆ ಒಂಬತ್ತು ಗಂಟೆಯ ಮೋಟಾರಿನಲ್ಲಿ ಮನೆಗೆ ಬರುತ್ತೇನೆ

ಇಂತಿ ಬೇಡಿಕೊಳ್ಳುವ ಆಶೀರ್ವಾದಗಳು,

'ಸೀತಾದೇವಿ'

೭

ಅರವಿಂದನ ಡೈರಿಯಿಂದ :—ತಾ. ೧೮–೬–೪೧.

' ಇವತ್ತು ಅತ್ತಿಗೆ ಬಂದಿದ್ದಾರೆ. ಬಂದವರೇ ನಾನು ಅಲ್ಲಲ್ಲಿ ಹಚ್ಚಿಟ್ಟಿದ್ದ ಸಿನೆಮಾ ನಟಿಯರ ಚಿತ್ರಗಳನ್ನು ' ಅಗ್ನಿ ನಾರಾಯಣ ಸ್ವಾಹಾ ' ಮಾಡಿದ್ದಾರೆ. ಅಣ್ಣನ ಕೋಣೆಯಲ್ಲಿದ್ದ ಎಲ್ಲಾ ಪೆಟ್ಟಿಗೆಗಳನ್ನೂ ಪುಸ್ತಕಗಳನ್ನೂ ಮಗುಚಿ ಹಾಕಿ, ಏನನ್ನೋ ಹುಡುಕಿದ್ದಾರೆ. ಬಹುಶಃ ಎಲ್ಲಾದರೂ ಪ್ರಣಯ ಪತ್ರಗಳಿವೆಯೋ - ಎಂದಿರಬೇಕು

ಮಧ್ಯಾಹ್ನ ಊಟಕ್ಕೆ ಅಣ್ಣ ಮನೆಗೆ ಬಂದಿದ್ದಾಗ, ಅತ್ತಿಗೆ ಅಡಿಗೆಯ ಕೋಣೆಯಲ್ಲಿ ಎಲೆಯಿಟ್ಟು, ಮಣೆಯನ್ನು ಮಡಗಿ, ಕುಳಿತಿದ್ದರು. ಅಣ್ಣ ಬಂದವರೇ ಕೈಕಾಲು ತೊಳೆದು ' ಅರೂ, ಹೋಟೆಲಿನವ ಅನ್ನ ತಂದನೋ ?' ಅಂದ ' ಹೌದು, ಅಣ್ಣ ಅಡಿಗೆ ಕೋಣೆಯಲ್ಲಿದೆ, ಅಂದೆ. ಅಣ್ಣ ನೆಟ್ಟಗೆ ಅಡಿಗೆ ಕೋಣೆಗೆ ಹೋದ. ಐದು ನಿಮಿಷ – ಕೋಣೆಯೊಳಗಿಟ್ಟ ಕಾಲು ಒಳಗೇನೆ, ಹೊರಗಿದ್ದ ಕಾಲು ಹೊರಗೇನೆ ! ಅಷ್ಟು ಅವಾಕ್ಕಾಗಿದ್ದ. ಅನಂತರ ಫಕ್ಕನೆ ಒಳಹೊಕ್ಕು ಅತ್ತಿಗೆಯ ಹೆಗಲ ಮೇಲೆ ಕೈಯಿಟ್ಟು, ' ಸೀತಾ ' ಎಂದ. ನಾಚಿಕೆಯಿಂದ ತಲೆಬಾಗಿಸಿದ್ದ ಅತ್ತಿಗೆ ಮೆಲ್ಲನೆ ತಲೆಯೆತ್ತಿದರು. ನಾನು ಹೊರಗೇ ಕಿವಿಕೊಟ್ಟು ಆಲಿಸುತ್ತಾ ನಿಂತಿದ್ದೆ.

ಐದು ನಿಮಿಷ ಮೌನ ಅನಂತರ ಅಣ್ಣ ಕೇಳಿದ. ' ಏನೇ ? ಸಪ್ಟೆಂಬರಿನಲ್ಲಿ ಬರುತ್ತೇನೆಂತ ಹೇಳಿದವಳು ಫಕ್ಕನೆ ಜೂನ್‌ನಲ್ಲೇ ಬಂದುಬಿಟ್ಟೆ?'

' ಏನಿಲ್ಲಾ, ನಿಮ್ಮನ್ನು ನೋಡದೆ ಮನಸ್ಸಿಗೆ ಬಹಳ ಕಸಿವಿಸಿಯಾಯಿತು. ಅಂತು ಬಂದು ಬಿಟ್ಟೆ.'

ಸ್ವಲ್ಪ ಮೌನ, ಅನಂತರ ಅತ್ತಿಗೆ ಕೇಳಿದರು. ' ಹೌದೇನ್ರಿ ? ನೀವು ಈಗ ರಾತ್ರಿ ಮನೆಗೆ ಬರುವಾಗ ಮಧ್ಯರಾತ್ರಿ ಮೀರುತ್ತೇನ್ರಿ ?'

' ಇಲ್ಲ.'

' ಹೊರಗೆ ಗೋಡೆಗೆ ಹಚ್ಚಿಟ್ಟಿದ್ದ ಚಿತ್ರಗಳು ?'

' ಸಿನೆಮಾ ನಟಿಯರವೇ, ಅವನ್ನು ಅರವಿಂದ ನೋಟೀಸುಗಳಿಂದ ಕತ್ತರಿಸಿ ಹಚ್ಚಿದ.'

' ನೋಡೋಣ್ರೀ....ತೂನೇ ಮುಝುಕೋ .ಪದ ಹಾಡಿ '

'ನನಗೆ ಬರೋಲ್ಲ ಕಾಣೆ !! ಏನಿದು ಹುಚ್ಚು !

ಒಂದು ಕ್ಷಣ ಮೌನ ಕೊನೆಗೆ ಅತ್ತಿಗೆ ಕರೆದರು 'ಅರೂ '

ನಾನು ಪುಸ್ತಕಗಳನ್ನೆಲ್ಲಾ ಬಗಲಲ್ಲಿ ತುರುಕಿಸಿ, 'ಅಣ್ಣಾ , ಶಾಲೆಗೆ ಹೊತ್ತಾಯಿತು. ನಾನು ಹೋಗುತ್ತೇನೆ. ಆದರೆ ಅತ್ತಿಗೆಯ ಹತ್ತಿರ ಕೇಳಿಬಿಡು. 'ಇನ್ನು ನಿನಗೆ ತವರುಮನೆ ಬೇಕೇ ? ಎಂದು ' ಎನ್ನುತ್ತಾ ಮೆಟ್ಟಿಲಿಳಿದೆ, ಮಾರ್ಗ ಸೇರಿದೆ.'

---

# ಕಾಣೆಯಾದ ಕೈಬಳೆಗಳು

ಅಯ್ಯೋ ಏನು ಅನಾಹುತ

ನನ್ನ ಮೇಲೆ ಕಳ್ಳತನದ ಅಪವಾದವೇ ?

ಹೀರೋಶೀಮಾದ ಮೇಲೆ ಅಮೇರಿಕದ ಅಣುಬಾಂಬು ಬಿದ್ದಾಗ ಜಪಾನಿಯರಿಗೆ ಅಷ್ಟು ಭೀಕರವಾಗಿರಲಿಕ್ಕಿಲ್ಲ! ಗಾಂಧೀಜೀಯವರ ಮೇಲೆ ನಾಥೂರಾಮ ಗೋಡ್ಸೆಯು ಗುಂಡು ಹಾರಿಸಿದಾಗ, ಭಾರತೀಯರಿಗೆ ಅಷ್ಟು ವಿಸ್ಮಯವಾಗಿರಲಿಕ್ಕಿಲ್ಲ! ರಷ್ಯಾದಲ್ಲಿ ಸ್ಟಾಲಿನ್ನರ ಮರಣವಾರ್ತೆಯನ್ನು ಕೇಳಿ, ಮಂಗಳೂರಿನ ಕಮ್ಯೂನಿಸ್ಟರಿಗೂ ಅಷ್ಟು ದುಃಖವಾಗಿರಲಿಕ್ಕಿಲ್ಲ!!!

ಅದರ ನೂರು ಪಾಲು ಭೀಕರ - ಇನ್ನೂರು ಪಾಲು ವಿಸ್ಮಯ - ಮುನ್ನೂರು ಏಕೆ ? ಸಾವಿರ ಪಾಲು ದುಃಖವಾಯಿತು ನನಗೆ !

ಅಲ್ಲ, ಸೋನಿಯಾ ಹಾಗೆಂದರೆ ಎಂದಳು ಆದರೆ ಸೀತೆ – ನನ್ನ ಈ ಸೀತೆ – ಅಗ್ನಿ ಸಾಕ್ಷಿಯಾಗಿ ನನ್ನ ಧರ್ಮಾರ್ಥ ಕಾಮ ಮೋಕ್ಷಗಳಲ್ಲಿ ಪಾಲುಗಾರಳಾದ ನನ್ನ ಈ ಚೋಟುದ್ದ ಪೋರಿ – ನನ್ನ ಮೇಲೆ ಸಂದೇಹ ತಾಳಬೇಕೆ ? ಇವಳಿಗೆ ನಾಲ್ಕು ಮಕ್ಕಳಾಯಿತೆಂದ ಮಾತ್ರಕ್ಕೆ ನನ್ನಿಂದ ಈಕೆ ಹಿರಿಯಳಾದಳೇ ?

ಸಾವಿರ ಪಾಲು ಅಲ್ಲ, ಹತ್ತು ಸಾವಿರ ಪಾಲು ದುಃಖ ಉದ್ಭವವಾಯಿತು ನನ್ನ ಹೃದಯದಲ್ಲಿ !

ಈ ಅಪವಾದವನ್ನು ಹೊತ್ತು ನಾನು ಸಾಯಲೇ ?

ಅಲ್ಲ, ಬದುಕಲೇ ???

ಇದಕ್ಕಿಂತ ಕ್ಷುಲ್ಲಕ ಕಾರಣಕ್ಕಾಗಿ ಆತ್ಮಹತ್ಯೆ ಮಾಡಿಕೊಂಡವರೆಷ್ಟಿಲ್ಲ! ಹೆಂಡತಿ ಸೊಗಸಾದ ಅಡಿಗೆಯನ್ನುಮಾಡಿ ಬಡಿಸುವುದಿಲ್ಲ ಎಂಬ ಕಾರಣದಿಂದ ಬಾವುಟಿ ಗುಡ್ಡೆಯ ಗೋಳೀಮರಕ್ಕೆ ನೇಣು ತಕ್ಕೊಂಡವನೊಬ್ಬನ ದಾಖಲೆ ಇದೆ. ಹೆಂಡತಿ – ತನ್ನ ಮಕ್ಕಳ ಯೋಗಕ್ಷೇಮವನ್ನು ದೇವರಿಗೆ ಅರ್ಪಿಸಿ, ಇತರರ ಮಕ್ಕಳ ಯೋಗಕ್ಷೇಮ ಚಿಂತನೆಗಾಗಿ ಶಿಶುವಿಹಾರಕ್ಕೆ ಅನುದಿನ ಹೋಗುತ್ತಾಳೆಂಬ ಕಾರಣದಿಂದ ಬಾವಿಗೆ ಹಾರಿದವನೊಬ್ಬನ ಸಮಾಚಾರ ನಿನ್ನಿನ ದೈನಿಕದಲ್ಲಿ ಪ್ರಕಟವಾಗಿದೆ. ಹಾಗಿರುವಾಗ ನಾನು ನಾಸೋ

ದುಃಖವು ಹೃದಯವನ್ನು ತುಂಬಿ, ಕ್ರೋಧವಾಗಿ ಸ್ಫೋಟವಾಯಿತು.

ಹೇಳಿದೆ. “ಸೀತಾ, ನಿನಗೆ ಬುರುಡೆ ಇಲ್ಲ ನಿನ್ನ ಗೆಳತಿ ಸೋನಿಯಾಳ ತಲೆಯೊಳಗೆ ಮೆದುಳಿಲ್ಲ, ಅದರ್ ನೈಬನ ಬೈಹುಲ್ಲು ಇತ್ತು, ಅದೂ ಈಗ ಕೊಳೆತು ಹೋಗಿದೆ.”

ನಾನು ಮನಸ್ಸಿನೊಳಗಿನ ಉದ್ವೇಗವನ್ನು ತಡೆಯಲಾರದೆ, ಚಾವಡಿಯಲ್ಲಿ ಶತಪಥ ಸುತ್ತುತಿದ್ದೆ ಆಫೀಸಿನ ಕಾರ್ಯಭಾರದಿಂದ ಸೋತಿದ್ದರೂ, ಕಾಲುಗಳು ಯಂತ್ರದಂತೆ ಚಾವಡಿಯನ್ನು ಸುತ್ತುತ್ತಿದ್ದವು ಆಫೀಸಿನ ಲೆಕ್ಕ ಪತ್ರಗಳ ಗಲಾಟೆಯಿಂದ ತಲೆ ಬಿಸಿ ಏರಿದ್ದರೂ, ಸೀತೆಯ ಸಂದೇಹವು ನನ್ನ ಮೆದುಳನ್ನು ಕೊರೆಯುತಿತ್ತು

ರಾತ್ರಿ ಒಂಭತ್ತು ಗಂಟೆಯ ಸಮಯ. ಆಫೀಸಿನ ಕೆಲಸವನ್ನು ಮುಗಿಸಿ, ಮನೆಗೆ ಬಂದಿದ್ದೆನಷ್ಟೆ ಚಾವಡಿಯಲ್ಲಿ ಕಾಲಿಡುತ್ತಲೇ, ದೀಪದೆದುರು ಕುಳಿತು, ಕಸೂತಿ ಕೆಲಸ ಮಾಡುತ್ತಿದ್ದ ಸೀತಾ ನನ್ನ ಮೇಲೆ ಈ ಅಪವಾದದ ಅಣು ಬಾಂಬನ್ನು ಹಾರಿಸಿದಳು!!

ಸೀತಾ ಹೇಳಿದಳು “ಅಲ್ರೀ, ನಿಮಗೆ ನಿನ್ನೆ ರಾತ್ರಿ ಸೋನಿಯಾ–ಶೇಖರರು ಎಲ್ಲಿ ಗಂಟುಬಿದ್ದರು?”

“ಜೋಡಿಗುಡ್ಡೆಯಲ್ಲಿನ ಇಗರ್ಜಿಯ ಎದುರು. ನಾನು ಆಫೀಸಿನ ಕೆಲಸ ಮುಗಿಸಿ, ಮನೆಗೆ ಮರಳುತ್ತಾ ಇದ್ದೆ. ಅವರು ಸಿನೆಮಾ ಮುಗಿಸಿ ಮನೆಯತ್ತ ಸಾಗುತ್ತಿದ್ದರು.”

“ಮತ್ತೇನಾಯಿತು?”

"ಮಾತಾಡುತ್ತ ತನ್ನ ಮನೆಯವರೆಗೆ ಹೋಗೋಣ ಎಂದ ಶೇಖರ. ದಾರಿಯಲ್ಲಿ 'ರಂಭಾರೂಟಿ' ಕ್ಲಬ್ಬಿನ ಕಾಫಿಯನ್ನು ಕುಡಿಸುತ್ತೇನೆ ಎಂದ. ಆ ಹಾಳು ಕಾಫಿಗೆ ಮಣ್ಣು ಹಾಕ ಅದರ ದೆಸೆಯಿಂದ ಅವನ ಬೆನ್ನು ಹತ್ತಿದರೆ ಈ ಅಪವಾದ ಬರಬೇಕೇ ?"

"ಮನೆಯನ್ನು ಮುಟ್ಟಿದ ಅನಂತರ, ಏನು ಮಾಡಿದಿರಿ ?" ಎಂದು ಸೀತೆಯ ಪ್ರಶ್ನೆ "ಅವರನ್ನು ಮನೆಯ ತನಕ ತಲುಪಿಸಿ, ತಾವು ವಾಪಾಸು ಬರಬಹುದಿತ್ತಲ್ಲ ?"

"ವಾಪಾಸು ಬರಬಹುದಿತ್ತು ಆದರೆ ನನಗೆ ಈಗ ಶನಿದೆಸೆಯಂತೆ .. ನನ್ನ ಜಾತಕ ನೋಡಿ, ನಿನ್ನ ಅಪ್ಪ ಹೇಳಿದ್ದರು ಆ ಶನಿಯ – ಕಾರ್ಭಾರು ಇದು ! ಮನೆಯೊಳಗೆ ಬಂದು ಐದು ನಿಮಿಷ ಇದ್ದು ಹೋಗು ಅಂದ ಶೇಖರ. ಸಿಗಲಿ ಅವ ನನಗೆ! ಅವನ ಮುಂಡೆ ಪುಡಿಗುಟ್ಟುತ್ತೇನೆ. ಸಾಯಂಕಾಲದ ಕಾಫಿಗೆ ರವಾಲಾಡು ಮಾಡಿದ್ದೇನೆ, ಬಂದು ತಿಂದು ಹೋಗಿ - ಎಂದು ವಯ್ಯಾರ ದಿಂದ ಕೇಕೆ ಹಾಕಿದಳು ಆ ನಿನ್ನ ಗೆಳತಿ. ಅವಳ ಆ ಸೊಟ್ಟ ಮೂತಿಗೆ ಮಂಗಳಾರತಿ ಮಾಡಲಿಕ್ಕೆ ! "

"ಮುಂದೆ ?"

"ಮುಂದೇನು ? ಮನೆಯೊಳ ಹೊಕ್ಕೆ. ಮೇಜಿನೆದುರು ಕುರ್ಚಿಯಲ್ಲಿ ಕುಳಿತೆ. ಶೇಖರ ಅಲ್ಲೇ ಇನ್ನೊಂದು ಕುರ್ಚಿಯನ್ನಾಶ್ರಯಿಸಿದ ಸೋನಿಯಾ ಒಳಹೋಗಿ, ಒಂದು ಬಟ್ಟಲಲ್ಲಿ ಎರಡು ರವಾಲಾಡುಗಳನ್ನೂ ಒಂದು ಲೋಟದಲ್ಲಿ ತಣ್ಣೀರನ್ನೂ ತಂದಿತ್ತಳು. ತಿಂದೆ. ಈ ಅವಸ್ಥೆ ನನಗೆ ಮೊದಲೇ ತಿಳಿದಿದ್ದರೆ, ಆ ರವಾಲಾಡುಗಳನ್ನು ಅಲ್ಲೇ ವಾಂತಿಮಾಡಿ, ಬರುತ್ತಿದ್ದೆ."

"ಆಮೇಲೇನಾಯಿತು ?"

"ಆಮೇಲೇನಾಗುವುದು ಮಣ್ಣು ! ಆ ಎರಡು ರವಾಲಾಡುಗಳನ್ನೂ, ಒಂದು ಲೋಟ ನೀರನ್ನೂ ಕುಡಿದುದರ ಬಾಬ್ತು, ಹೊಟ್ಟೆಯೊಳಗಿನಿಂದ ರಶೀದಿ ಬಂತು – ಮೂರು ಸಲ ಡರ‍್ರನೆ ತೇಗಿದೆ !"

"ಅನಂತರ ?"

"ಅನಂತರ ನಾನು ಹೊರಟೆ – ಮನೆಗೆ ಬರಲಿಕ್ಕೆ !"

"ಆಮೇಲೆ ?"

ನನ್ನ ಮನಸ್ಸು ಕಸಿವಿಸಿಗೊಂಡಿತು. ಅನಂತರ ? ಆಮೇಲೆ ? ಮತ್ತೇನಾಯಿತು ?

ಕೇಳಿದೆ "ಏನೇ ಇದು ಸೀತಾ, ಅನಂತರ – ಆಮೇಲೆಗಳು ? ನಾನೇನು ಪಂಜರದಲ್ಲಿದ್ದ ಕೈದಿಯೇ ? ಅಲ್ಲ ನೀನೇನು ಸರಕಾರೀ ಕಡೆಯ ವಕೀಲಳೇ ?"

"ಅಲ್ಲರೀ, ಅನಂತರ ಏನಾಯಿತು ಹೇಳಿ"

"ನಂತರ ಆಗುವುದೇನು ? ನೆಟ್ಟಗೆ ಮನೆಗೆ ಬಂದೆ."

"ಅಲ್ರೀ, ಅದಕ್ಕೆ ಮೊದಲು ?"

"ಅದಕ್ಕೆ ಮೊದಲು ಮನೆಗೆ ಹೊರಟೆ."

"ಅದಕ್ಕೂ ಮೊದಲು ?"

ಏನು ಅವಾಂತರವಿದು ? ಒಂದು ಗಳಿಗೆಯ ಮೊದಲು ಅನಂತರ ? – ಆಮೇಲೆ ? – ಎಂದು ಪ್ರಶ್ನಿಸಿದ ಸೀತೆ – ಈಗ ಆ ಮೊದಲು ? ಅದಕ್ಕೂ ಮೊದಲು ? – ಎಂದು ಪ್ರಶ್ನಿಸುತ್ತಿದ್ದಾಳೆ ! ಎಂತಹ ಭಯಂಕರ ಅದ್ಭುತ ಟ್ರಾನ್ಸ್‌ಫರ್ ಸೀನರಿ !

ಹೇಳಿದೆ. "ಅದಕ್ಕೂ ಮೊದಲು ರವಾಲಾಡುಗಳ ಭಕ್ಷಣ. ಅದರ ಮೇಲೆ ಒಂದು ಲೋಟ ನೀರಿನ ಪೂರ್ಣಾಹುತಿ ! ಅಲ್ಲಿಗೆ ಯಜ್ಞ ಸಮಾಪ್ತಿ !"

"ಅಲ್ರೀ ಕೋಪಿಸಬೇಡಿ. ಒಂದು ಮಾತ್ರ ಮರೆತಿರಲ್ಲ ?" ಎಂದಳು ಸೀತಾ.

ಮರೆತೆ. ಛೆ ಹೇಗದು ? "ಇಲ್ಲ ಸೀತಾ, ಮರೆತಿಲ್ಲ. ಸೋನಿಯಾ ಕೊಟ್ಟದ್ದು ಎರಡೇ ರವಾಲಾಡು. ಮೂರು ಅಂತ ಹೇಳಿದ್ದಾಳೆಯೇ ? ಹಾಗಾದರೆ ಆ ನಿನ್ನ ಗೆಳತಿ ಶುದ್ಧ ಸುಳ್ಳುಗಾರ್ತಿ !" ಅಂದೆ.

"ಛೆ ! ಛೆ ! ಹಾಗಲ್ರೀ, ಬಳೆಗಳು ?"

ಫಜೀತಿಯಾಯಿತಲ್ಲ. ಹೊರಟಲ್ಲಿಗೆ ಬಂದು ಮುಟ್ಟಿದೆವಲ್ಲ ! "ಹೌದು, ನಾನು ರವಾಲಾಡು ತಿನ್ನುತ್ತಿರುವಾಗ ಸೋನಿಯಾ ತನ್ನ ಕೈಯಲ್ಲಿದ್ದ ಎರಡೂ ಬಂಗಾರದ ಬಳೆಗಳನ್ನೂ ಮೇಜಿನ ಮೇಲಿಟ್ಟಳು"

"ಇಟ್ಟದನ್ನು ನೋಡಿದರೇ ನೀವು ?"

ಎಂತಹ ಪ್ರಶ್ನೆ ಇದು ? "ಕಣ್ಣೆದುರಿಗೇನೇ ಕಳಚಿದ್ದಾಳೆ ಕೈ ಬಳೆಗಳನ್ನು,

ಇಟ್ಟಿದ್ದಾಳೆ ಮೇಜಿನ ಮೇಲೆ. ನೋಡದೆ ಇರಲು ನಾನೇನು ಕುರುಡನೇ?! ಅಲ್ಲ, ಅವಳು ಕೈಯಿಂದ ಬಳೆಗಳನ್ನು ಕಳಚಿ, ಮೇಜಿನ ಮೇಲೆ ಇಟ್ಟುದನ್ನು ನೋಡಿದ ಮಾತ್ರಕ್ಕೆ, ನಾನೇನು ಆ ಬಳೆಗಳ ಕಳವು ಮಾಡಿದೆನೆಂದು ತಿದ್ಧಾಂತವೇ?"

"ಅಲ್ಲ, ಅವರು ಒಳಹೋಗಿ, ಊಟಮಾಡಿ, ವಾಪಸು ಬಂದನಂತರ ಚಾವಡಿಯಲ್ಲಿ ನೋಡುವಾಗ್ಗೆ ಬಳೆಗಳೇ ಇರಲಿಲ್ಲವಂತೆ ಮೇಜಿನ ಮೇಲೆ!"

"ಚಾವಡಿಯ ಬಾಗಿಲು ಹಾಕಲಿಕ್ಕೆ ಮರೆತಿರಬಹುದು!"

"ನೀವು ಹೊರಟು, ಚಾವಡಿಯ ಮೆಟ್ಟಲಿಳಿದ ಕೂಡಲೆ, ಅವರು ಬಾಗಿಲು ಮುಚ್ಚಿ, ಚಿಲುಕ ಹಾಕಿಲ್ಲವೇ?"

ಅದೂ ಹೌದು. ಬಾಗಿಲು ಮುಚ್ಚಿದ್ದು ನೋಡಿದ್ದೇನೆ. ಚಿಲುಕ ಹಾಕಿದ ಸದ್ದು ಕೇಳಿದೆ.

"ಹಾಗಿದ್ದರೆ, ಅವರಿಬ್ಬರಲ್ಲಿ – ಸೋನಿಯಾ ಶೇಖರರಲ್ಲಿ ಒಬ್ಬರು ಅದನ್ನು ಅಸ್ತ್ರಾಯಫಟ್ ಮಾಡಿದ್ದಾರೆ."

"ಆದರೆ ಅವರಿಗೆ ನಿಮ್ಮ ಮೇಲೆ ಸಂದೇಹ ಬಂದಿದೆಯಲ್ಲ! ಅವರೇ ಅದನ್ನು ಅಡಗಿಸಿಡಲು, ಅವರದೇ ಒಡವೆಯಾಗಿರುವಾಗ ಅಡಗಿಸಿಡುವ ಅಗತ್ಯವೇನು?"

"ಅವರ ಸಂದೇಹಕ್ಕೆ ಬೆಂಕಿಹಾಕ!"

ಸೀತಾ ಕಿಂಚಿತ್ ಯೋಚನಾಮಗ್ನಳಾದಳು – ಹೇಳಿದಳು. "ಬರೇ ಸಂದೇಹವೇ ಆಗಿದ್ದರೆ, ಬೆಂಕಿ ಹಾಕಬಹುದಿತ್ತು. ಆದರೆ ಸೋನಿಯಾಗೆ ಖಂಡಿತವಾಗಿದೆ. ನೀವೇ ಆ ಬಳೆಗಳನ್ನು ಮೇಜಿನ ಮೇಲಿಂದ ಜಾರಿಸಿರುವಿರೆಂದು – ಇದು ಇಷ್ಟರತನಕ ಅವರ ಮನೆಯೊಳಗೇನೇ ಉಳಿದ ವಿಚಾರ. ನಾಳೆ ಹೊರಹೊರಡಿತೆಂದರೆ, ಮಂಗಳೂರಿನಲ್ಲಿ ತಲೆಯೆತ್ತಿ ನಡೆಯುವುದು ಅಸಾಧ್ಯವಾದೀತು!"

ಸೋನಿಯಾಗೆ ಸಂದೇಹವಿಲ್ಲ! ಖಂಡಿತವಾಗಿದೆ!! ನಾಳೆಗೆ ಮಂಗಳೂರಲ್ಲಿ ನಾವು ತಲೆಯೆತ್ತಕೂಡದು!!! ಮಂಗಳೂರಲ್ಲೇ ಹುಟ್ಟಿದ ನಾನು!

ಮಂಗಳೂರಲ್ಲೇ ಬೆಳೆದವ ನಾನು !! ಇನ್ನು ಸಾಯುವುದಾದರೂ ಮಂಗಳೂರಲ್ಲೇ ಅಲ್ಲದೆ, ಪರಊರಿಗೆ ಹೋಗಿ ಸತ್ತೇನೇ ?

ನೆಟ್ಟಗೆ ಒಳಗೆ ಹೋದೆ.

ರೇಶನ್ ಅಕ್ಕಿಯನ್ನು ಕುಟ್ಟಿ, ಸ್ವಚ್ಛಗೊಳಿಸಲು ಮೊನ್ನೆ ತಾನೆ ಅಂಗಡಿಯಿಂದ ತಂದ ಒನಕೆ ಇತ್ತು ಅಡಿಗೆ ಕೋಣೆಯಲ್ಲಿ ! ಅದಕ್ಕೆ ಕೈಯಿತ್ತೆ.

ಹೊರಬಂದು " ಸೀತಾ !" ಅಂದೆ.

ತಲೆ ಕೆಳಹಾಕಿ, ಯೋಚನಾಮಗ್ನಳಾಗಿದ್ದ ಸೀತಾ ತಲೆಯೆತ್ತಲಿಲ್ಲ. ಏನೆಂದು ಪ್ರಶ್ನಿಸಿದಳು ಮಾತ್ರ.

" ನೋಡಿಲ್ಲಿ ನನ್ನ ಕೈಯಲ್ಲಿ ಒನಕೆ. ರೇಶನ್ ಅಕ್ಕಿಯ ಬದಲು, ಸೋನಿಯಾ – ಶೇಖರರ ಮಂಡೆಗಳನ್ನು ಪುಡಿಗುಟ್ಟುತ್ತೇನೆ. ಹಿಂದೆ ಕ್ಷತ್ರಿಯರನ್ನು ಸಂಹಾರ ಮಾಡಲೆಳೆಸಿ, ಕೊಡಲಿ ಹಿಡಿದು ಹೊರಟಿದ್ದ ಪರಶುರಾಮ ! ಇಂದು ಸೋನಿಯಾ ಶೇಖರರನ್ನು ಈ ಪೃಥ್ವಿಯಿಂದ ಅಳಿಸಲು ನಾನು ಒನಕೆ ರಾಮನಾಗುತ್ತೇನೆ !"

ಸೀತಾ ತಲೆಯೆತ್ತಿ ನೋಡಿ, ಕಿಸಕ್ಕನೆ ನಕ್ಕಳು.

" ಒನಕೆಯನ್ನು ಒಳಗಿಡಿ. ನಾನೂ ಬರುತ್ತೇನೆ. ಇಬ್ಬರೂ ಹೋಗಿ, ಸೋನಿಯಾ – ಶೇಖರರೊಡನೆ ಸಮಾಧಾನದಿಂದ ಮಾತನಾಡಿ, ಒಂದು ಇತ್ಯರ್ಥಕ್ಕೆ ಬರೋಣ," ಅಂದಳು.

ಒನಕೆಯನ್ನು ಒಳಗಿಟ್ಟು ಸೀತೆಯೊಡನೆ ಹೊರಟೆ.

× × × ×

ಚಾವಡಿಯಲ್ಲಿ ಮೇಜಿನೆದುರು ಕುರ್ಚಿಗಳಲ್ಲಿ ಕುಳಿತಿದ್ದರು ಸೋನಿಯಾ – ಶೇಖರರು. ಶೇಖರನು ನಾವು ಹೋಗುವಾಗ ಏನೋ ಬರೆಯುತಿದ್ದ ನಾನು ಚಾವಡಿಯೊಳಹೊಕ್ಕ ಕೂಡಲೇ ಬರೆಯುವುದನ್ನು ನಿಲ್ಲಿಸಿ, ಮೇಜಿನ ಡ್ರಾವರನ್ನು ಎಳೆದು, ಪೆನ್ನನ್ನು ಅದರೊಳಗೆ ತುರುಕಿಸಿ, ಡ್ರಾವರ್ ಮುಚ್ಚಿ, ಅದಕ್ಕೆ ಆತು ಕೂತ !

ಬಂಗಾರದ ಬಳೆಗಳನ್ನು ಜಾರಿಸಿದವ, ಪೆನ್ನನ್ನು ಬಿಟ್ಟಾನೇ ? – ಎಂಬ ಸಂದೇಹ ಮೂಡಿತೇನೋ ?

ಸೀತಾ ಹೇಳಿದಳು. "ಸೋನಿಯಾ, ನೋಡು. ಅವರನ್ನೂ ಕರಕೊಂಡು ಬಂದಿದ್ದೇನೆ. ಅವರು ನಿನ್ನ ಬಳೆಗಳನ್ನು ಒಯ್ಯಲಿಲ್ಲವೆನ್ನುತ್ತಾರೆ!"

ಸೋನಿಯಾ ದುರುಗುಟ್ಟಿ ನನ್ನನ್ನೇ ನೋಡುತ್ತಾ, ಹೇಳಿದಳು. "ಕದ್ದವರು ತಾನು ಕದ್ದಿರುವೆನೆಂದು ಒಪ್ಪಿಕೊಳ್ಳುವುದನ್ನು ನಾನು ಇಂದಿನ ತನಕ ಕೇಳಿಲ್ಲ."

ಸೀತಾ ಹೇಳಿದಳು. "ಸೋನಿಯಾ ನನಗಾಗಿ ಒಂದು ಕೆಲಸ ಮಾಡುವೆಯಾ?"

"ಏನದು?"

"ಒಂದು ಗಳಿಗೆಯ ಮಟ್ಟಿಗೆ ಅವರ ಮಾತನ್ನೇ ನಂಬೋಣ. ಅವರು ಅದನ್ನು ಒಯ್ಯಲಿಲ್ಲವಾದರೆ, ಮತ್ತೆಲ್ಲಿಗೆ ಹೋದವು ಆ ಬಳೆಗಳು?"

"ಎಲ್ಲೆಲ್ಲಿಗೆ ಹೋಗಲು ಬಳೆಗಳಿಗೇನು ಕಾಲು ಇದೆಯೋ? ಐದು ಪವನಿಗೆ ಮಾಡಿಸಿದ ಬಳೆಗಳು ಗಾಳಿಗೂ ಹಾರಿಹೋಗಲಿಕ್ಕಿಲ್ಲ"

ಸೀತೆಯೆಂದಳು "ನೀನೆ ಎಲ್ಲಾದರೂ ತೆಗೆದಿಟ್ಟಿರಬಹುದು; ನಂತರ ನಿನಗೆ ಮರವೆಯಾಗಿರಬಹುದು."

ಸೋನಿಯಾ ಹೇಳಿದಳು. "ನಾನು ತೆಗೆದಿಟ್ಟದ್ದು ಮೇಜಿನ ಮೇಲೆಯೇ! ಆದರೂ ಇಡೀ ಮನೆ ತುಂಬಾ ಹುಡುಕಿಯಾಯಿತು."

"ಇಡೀ ಮನೆ ಹುಡುಕಿದಿರೇ?"

"ಬಚ್ಚಲು ಕೊಟ್ಟಗೆಯಿಂದ ಹಿಡಿದು ಅಂಗಳತನಕವೂ ಹುಡುಕಾಡಿದೆವು. ನಿನ್ನವರು ಒಯ್ದರೆಂದಾದರೆ, ಮತ್ತೆ ಇಲ್ಲಿ ಹುಡುಕಿದಲ್ಲಿ ಬಳೆಗಳು ಸಿಗುವವೇ?"

ಸೀತೆಯತ್ತ ನೋಡಿದೆ- ಸೀತೆಯ ಮೋರೆ ಜೋಲುಬಿದ್ದಿತ್ತು. ಆದರೂ ಧೈರ್ಯಗೆಡಲಿಲ್ಲ ಆಕೆ.

"ಸೋನಿಯಾ, ನಾನು ಕೆಲವು ಪ್ರಶ್ನೆಗಳನ್ನು ಕೇಳುತ್ತೇನೆ. ಉತ್ತರಿಸುವೆಯಾ? ಕೋಪಿಸುವುದಿಲ್ಲವಷ್ಟೆ?"

"ಕೋಪಿಸುವುದಿಲ್ಲ ಕೇಳು."

ಸೀತಾ ಪುನಃ ಕೋರ್ಟಿನ ವಕೀಲರ ಭೂಮಿಕೆಯನ್ನು ತಾಳಿದಳು.

"ಇವರು ನಿನ್ನೆ ರಾತ್ರೆ ಇಲ್ಲಿಂದ ಮೆಟ್ಟಲಿಳಿದು, ಅಂಗಳಕ್ಕೆ ಕಾಲಿಟ್ಟೊಡನೆ, ನೀನು ಚಾವಡಿಯ ಬಾಗಿಲು ಮುಚ್ಚಿದೆಯೇ?"

"ಬಾಗಿಲು ಮುಚ್ಚಿದ್ದು ಮಾತ್ರವಲ್ಲ; ಚಿಲುಕವನ್ನು ಕೂಡಾ ಹಾಕಿ, ಭದ್ರಪಡಿಸಿದೆ."

"ಮುಂದೇನು ಮಾಡಿದೆ?"

"ನಂತರ ಅವರು ದೀಪವನ್ನು ತಕ್ಕೊಂಡು, ಕೈಕಾಲು ತೊಳೆಯಲು ಬಚ್ಚಲಿಗೆ ಹೋದರು. ನಾನು ಉಟ್ಟ ಪತ್ತಳವನ್ನು ಬಿಚ್ಚಿಟ್ಟು, ಬೇರೆ ಸೀರೆ ಯನ್ನುಟ್ಟೆ."

"ನಂತರ?"

"ನಂತರ ನಾನೂ ಬಚ್ಚಲಿಗೆ ಹೋಗಿ, ಕೈಕಾಲು ತೊಳೆದು, ಅಡಿಗೆ ಕೋಣೆಗೆ ಹೋದೆವು. ಅವರಿಗೂ ಬಡಿಸಿ, ನಾನೂ ಊಟಮಾಡಿದೆ."

"ಊಟಕ್ಕೆ ಏನು ಪದಾರ್ಥ ಮಾಡಿದ್ದೆ?"

ಸೋನಿಯಾಗೆ ಸೀತೆಯ ಅಡ್ಡಸವಾಲುಗಳಿಂದ ಸ್ವಲ್ಪ ಕೋಪ ಬಂತೆಂದು ತೋರುತ್ತದೆ. "ಏಕೆ ನಿನಗೆ?" ಎಂದಳು.

ಸೀತೆ ಎಂದಳು. "ನೋಡು ಸೋನಿಯಾ, ಕೋಪಿಸುವುದಿಲ್ಲ, ಉತ್ತರಿಸುತ್ತೇನೆಂದು ಮಾತು ಕೊಟ್ಟಿದ್ದಿಯಲ್ಲ!"

ಸಿಡುಕಿನಿಂದ ಸೋನಿಯಾ ಹೇಳಿದಳು. "ಮಸೂರಿ ಬೇಳೆಯ ತೋವೆ; ತೊಂಡೆಕಾಯಿಯ ಹುಳಿ!"

"ನಂತರ ಮಜ್ಜಿಗೆಯೇ? ಮೊಸರೇ? ಹಾಲೇ?"

ನನಗೂ ದಿಗ್ಭ್ರಮೆಯಾಯಿತು. ಊಟಕ್ಕೆ ಮಜ್ಜಿಗೆಯಾದರೇನು? ಮೊಸರಾದರೇನು? ಹಾಲಾದರೇನು?

ಕಾಣೆಯಾದ ಕೈಬಳೆಗಳಿಗೂ, ಹಾಲು ಮಜ್ಜಿಗೆ ಮೊಸರುಗಳಿಗೂ ಎಲ್ಲಿಯ ಸಂಬಂಧ?

ಸೋನಿಯಾ ಹೇಳಿದಳು. "ಹಾಲು ಮತ್ತು ಮಜ್ಜಿಗೆ!"

"ಊಟವಾದ ನಂತರ ಏನು ಮಾಡಿದಿರಿ?"

"ನಾವಿಬ್ಬರೂ ಕೈತೊಳೆದು ಹೊರಬಂದೆವು."

"ಶೇಖರಣ್ಣ ಮೊದಲೇ ಹೊರಬಂದರೆಂದು ತೋರುತ್ತದೆ. ಅಲ್ಲವೇ ಸೋನಿಯಾ?"

ಸೋನಿಯಾ ಎದೆ ಸೆಟೆಸಿದಳು. "ನೋಡೇ ಸೀತಾ. ನಿನ್ನವರು ಮಾಡಿದ

ಅಪರಾಧವನ್ನು ನನ್ನವರ ಮೇಲೆ ನೂಕಿಹಾಕುವ ಅಗತ್ಯವಿಲ್ಲ. ಅಲ್ಲದೆ ಸಾಧ್ಯವೂ ಇಲ್ಲ. ಏಕೆಂದರೆ ನನ್ನ ಊಟ ಮುಗಿಯುವ ತನಕವೂ ಅವರು ಅಡಿಗೆಯ ಕೋಣೆಯಲ್ಲೇ ಕೂತಿದ್ದರು. ನಂತರ ನಾವಿಬ್ಬರೂ ಸಂಗಡಲೇ ಹೊರಬಂದೆವು."

"ಆ ನಂತರ?"

"ಅವರು ಅದೇ ಕುರ್ಚಿಯ ಮೇಲೆ ಕುಳಿತು, ಒಂದು ಸಿಗರೇಟನ್ನು ಹೊತ್ತಿಸಿದರು."

"ಆಗ ಮೇಜಿನ ಮೇಲೆ ಬಳೆಗಳಿದ್ದವೇ?"

"ಕಾಣಲಿಲ್ಲ."

"ನೀನು ನೋಡಿದೆಯೇ?"

"ನೋಡಲಿಲ್ಲ."

"ಮುಂದೇನು ಮಾಡಿದೆ?"

"ಪತ್ತಲವನ್ನು ಮಡಚಿದೆ. ಮಡಿಕೆ (Fold) ಗಳನ್ನಾಗಿ ಮಡಚಿ, ಒಳಗೆ ಕಪಾಟಿನ ಒಳಗಿಟ್ಟು ಹೊರಬಂದು, ಇನ್ನು ಬಳೆಗಳನ್ನು ಒಳಗೆ ಇಡೋಣ ವೆಂದು ಹುಡುಕಿದರೆ ಬಳೆಗಳಿಲ್ಲ!"

"ಊಟ ತೀರಿಸಿ, ಹೊರಬರುವಾಗ್ಯೆ ಪತ್ತಲವೆಲ್ಲಿತ್ತು?"

"ಬಿಚ್ಚಿ ಮೇಜಿನ ಮೇಲೆಯೇ ಇಟ್ಟಿದ್ದೆ. ಅಲ್ಲೇ ಇತ್ತು!"

"ಸೀರೆಯನ್ನು ಹೇಗೆ ಮಡಚಿದೆ?"

"ಹೇಗೆಂದರೆ?"

"ಕೈಯಲ್ಲೇ ಹಿಡಿದು ಮಡಚಿದೆಯೆ?"

"ಅಲ್ಲ; ಮೇಜಿನ ಮೇಲಿಟ್ಟು ಮಡಚಿದೆ."

ಸೀತಾ ದೊಡ್ಡದೊಂದು ನಿಟ್ಟುಸಿರು ಬಿಟ್ಟಳು.

ಸ್ವಲ್ಪ ಯೋಚಿಸಿ, ಹೇಳಿದಳು. "ಸೋನಿಯಾ; ಹಾಗಾದರೆ ಆ ಸೀರೆಯ ಬಣ್ಣ ಕೆಂಪು ಅಲ್ಲವೇ?"

"ಅಲ್ಲ, ನೀಲಿಬಣ್ಣ!" ಅಂದಳು ಸೋನಿಯಾ.

"ಛೆ! ಸಾಧ್ಯವಿಲ್ಲ. ಕೆಂಪೇ ಆಗಿರಬೇಕು." ಎಂದು ಹಟತೊಟ್ಟಳು ಸೀತಾ.

ಸೋನಿಯಾ ಹೇಳಿದಳು. " ನಿನಗೆ ಹುಚ್ಚು ಹಿಡಿದಿದೆ ಸೀತಾ. ನನ್ನ ಪತ್ತಲದ ಬಣ್ಣ ನೀಲಿ, ಬೇಕಾದರೆ ತಂದು ತೋರಿಸುತ್ತೇನೆ."

ಸೋನಿಯಾ ಒಳಹೋದಳು. ಕಪಾಟಿನ ಬಾಗಿಲು ತೆರೆದು, ಪತ್ತಲವೊಂದನ್ನು ಹೊರತಂದಳು.

ಸೀತೆಯು ಸೋತಳು.

ಪತ್ತಲದ ಬಣ್ಣವು ನೀಲವಾಗಿತ್ತು.

ಸೀತೆಯು ಪತ್ತಲವನ್ನು ಕೈಯಲ್ಲಿ ತಕ್ಕೊಂಡಳು.

" ಇದೇ ಏನು ನೀನು ನಿನ್ನೆ ಉಟ್ಟ ಸೀರೆ?" ಎಂದು ಪಶ್ನಿಸಿದಳು.

" ಅಹುದು." ಎಂದಳು ಸೋನಿಯಾ.

ಸೀತಾ ಪತ್ತಲದ ಒಂದು ತುದಿಯನ್ನು ಕೈಯಲ್ಲಿ ಹಿಡಿದು, ನೆಲಕ್ಕೆ ಕೊಡವಿದಳು.

ಮಡಚಿಟ್ಟಿದ್ದ ಸೀರೆ ಬಿಚ್ಚಿತು.

ಅದರೊಂದಿಗೆ ಎರಡು ಬಂಗಾರದ ಬಳೆಗಳು ನೆಲಕ್ಕೆ ಬಿದ್ದು, ರಣಾತ್ಕಾರವಾಯಿತು!

ಸೀತಾ ಕಿಸಕ್ಕನೆ ನಕ್ಕಳು.

ಐದು ನಿಮಿಷ! ನಾನು ನಿಂತಂತೆಯೇ! ಸೋನಿಯಾ ನಿಂತಲ್ಲೇ ಪಾಷಾಣ ಮೂರ್ತಿ! ಶೇಖರ ಕುರ್ಚಿಯಲ್ಲೇ ಕಲ್ಲುಗೊಂಬೆ!

ಕೊನೆಗೆ ಶೇಖರನೇ ಎದ್ದ. " ಕ್ಷಮಿಸು ರಾಮೂ!" ಅಂದ.

ಸೋನಿಯಾ ದೈನ್ಯದಿಂದ " ಕ್ಷಮಿಸು ಸೀತಾ!" ಅಂದಳು

ನಾನು ಇಬ್ಬರನ್ನು ಸುಡುವೆನೆಂಬುವಷ್ಟು ತೀಕ್ಷ್ಣದೃಷ್ಟಿಯಿಂದ ಸೋನಿಯಾ – ಶೇಖರರನ್ನು ದಿಟ್ಟಿಸಿದೆ.

ಸೀತೆಯ ಕೈಹಿಡಿದು, " ನಡೆ ಸೀತಾ, ಇನ್ನು ಇಲ್ಲಿ ನಿಂತರೆ ನಮ್ಮ ಬುದ್ಧಿಯೂ ಈ ಪೊದ್ದು ಜಂತುಗಳಂತಾದೀತು " ಅಂದೆ.

ಮೆಟ್ಟಲಿಳಿದು, ಅಂಗಳ ಹಾದು, ಬೀದಿ ಮುಟ್ಟಿದೆವು.

ಮನೆಯ ಮೆಟ್ಟಲೇರುವಾಗ ಸೀತೆಯೊಡನೆ ಕೇಳಿದೆ. " ಸೀತಾ, ಹಾಲು ಮಜ್ಜಿಗೆ ಮೊಸರಿಗೂ ಬಳೆಗಳಿಗೂ ಸಂಬಂಧವೇನು?"

" ಏನೂ ಇಲ್ಲ. ಮುಂದೇನು ಕೇಳುವುದೆಂದು ತಿಳಿಯಲಿಲ್ಲ. ಮುಂದಿನ

ಪ್ರಶ್ನೆಯನ್ನು ಯೋಚಿಸಲಿಕ್ಕಾಗಿ, ಸಂಬಂಧವಿಲ್ಲದ ಆ ಪ್ರಶ್ನೆ ಕೇಳಿದೆ. ಅಷ್ಟೆ. ಮತ್ತೇನೂ ಇಲ್ಲ."

ಬಾಗಿಲು ತೆರೆದು, ಒಳಹೊಕ್ಕೆವು ಮೇಜಿನ ಮೇಲೆ ಇದ್ದ ದೀಪವನ್ನು ಉರಿಸುತ್ತೇನೆಂದು, ಕಿಸೆಯಲ್ಲಿನ ಬೆಂಕಿಪೆಟ್ಟಿಗೆಯನ್ನು ತೆಗೆದು, ಮೇಜಿನ ಬಳಿ ಹೋದೆ.

ದೀಪ ಉರಿಸಲಿಲ್ಲ, ಸೀತೆಯನ್ನು ಕರೆದೆ.

ಸೀತೆ ಸನಿಯಕ್ಕೆ ಬಂದಳು.

ದೀಪವನ್ನು ಐದು ನಿಮಿಷದ ನಂತರ ಉರಿಸಿದೆ.

---

# ಪ್ರಥಮ ಬಹುಮಾನ

ಭಾನುವಾರವಾಗಿತ್ತು ಮಧ್ಯಾಹ್ನವಾಗಿತ್ತು.

ಆಫೀಸಿನಿಂದ ಮನೆಗೆ ಬಂದವನೇ ಊಟ ತೀರಿಸಿ, ಕೋಣೆಯಲ್ಲಿ ಕೂತು ಕೊಂಡಿದ್ದೆ ಕುರ್ಚಿಯಲ್ಲಿ. ಎದುರು ಮೇಜಿನ ಮೇಲೊಂದು ರೀಮು ಕಾಗದ, ಒಂದು ಮಸಿ ಕುಪ್ಪಿ, ಒಂದು ಡಜನ್ ಪೇನಾಗಳು! ಯಾಕೆ?

ಯಾಕೆಂದು ಊಹಿಸಲು, ಜಗತ್ತಿನ ಸರ್ವಶ್ರೇಷ್ಠ ಪತ್ತೆದಾರನಾದ ಸೆಕ್ಸ್ಟನ್ ಬ್ಲೇಕನೋ ಅರಿಂದಮ ಬಾಬುವೋ ಅಥವಾ ಭಗವಾನ್ ದಾಸನೋ - ಯಾರನ್ನೂ ಕರೆಸುವ ಅವಶ್ಯವಿಲ್ಲ. ನನ್ನ – ನಿಮ್ಮ ಗೊಡ್ಡು ತಲೆಗಳೇ ಸಾಕು ಈ ಗೂಢವನ್ನು ಪರಿಹರಿಸಲು!

ಸರಿ, ನಿಮ್ಮ ಮೊದಲ ಊಹೆಯೇ ಸರಿ. ನಾನೊಂದು ಉತ್ತಮವಾದ ಚಿಕ್ಕ ಕತೆಯನ್ನು ಬರೆಯುವ ಸನ್ನಿಹಕ್ಕೆ ತೊಡಗಿದ್ದೆ!!

ಅಖಿಲ ಕರ್ನಾಟಕದ ಏಕಮಾತ್ರ "ಪ್ರಗತಿಶೀಲ" ಮಾಸಪತ್ರಿಕೆಯಾದ "ಕರಾಳವಾಣಿ"ಯು ಕನ್ನಡ ಅಕ್ಷರಗಳನ್ನು ಬರೆಯಬಲ್ಲ ಎಲ್ಲಾ ಕನ್ನಡಿಗರಿಗೂ ಆಹ್ವಾನವಿತ್ತಿತು – ಸಣ್ಣ ಕತೆಗಾಗಿ! ಪ್ರಥಮ ಬಹುಮಾನ ಪಡೆದ ಕತೆಗೆ ಒಂದು ಬಂಗಾರದ ಪದಕವು ಸಿಗುವುದಿದೆ. ಕತೆಯು ಪ್ರಗತಿಶೀಲವಾಗಬೇಕು; ಇಂದಿನ ಅನುದಿನದ ವಾತಾವರಣವನ್ನು ಚಿತ್ರಿಸುವಂತಹದಿರಬೇಕು....ಇನ್ನು ಏನೇನೋ ವಿಶೇಷಣಗಳಿದ್ದುವು ಜಾಹಿರಾತಿನಲ್ಲಿ. ಓದಿದ ನಾನು ಅದನ್ನು

ಬಿಡುವೆನೇ? ಕತೆ ಬರೆಯುವುದರಲ್ಲಿ ನಮ್ಮ ಬೀದಿಯ ಮಟ್ಟಿಗೆ ನಾನು "ಏಕಮಾತ್ರ"ನಾಗಿದ್ದೆ. "ಕರಾಳವಾಣಿ"ಯೋ–ಅಖಿಲ ಕರ್ನಾಟಕದ ಪ್ರಗತಿಶೂಲ ಪತ್ರಿಕೆಗಳಲ್ಲಿ "ಏಕಮಾತ್ರ"ವಾಗಿತ್ತು. ಅಂತೂ ನನಗೂ "ಕರಾಳವಾಣಿ"ಗೂ ಬಾದರಾಯಣ ಸಂಬಂಧ ಇದ್ದದ್ದೆ.

ಸಿಗರೇಟನ್ನೆತ್ತಿ ಬಾಯಿಗಿಟ್ಟು, ಬೆಂಕಿ ಹೊತ್ತಿಸಿ, ಮೇಜಿನ ಮೇಲೆ ಕಾಲುಗಳನ್ನು ಹಾಯಾಗಿ ನೀಡಿ, ಕುರ್ಚಿಯಮೇಲೆ ಆರಾಮವಾಗಿ ಬಿದ್ದು ಕೊಂಡು, ಮಾಡಿನ ಹಂಚುಗಳ ಮೇಲೆ ನೆಟ್ಟ ದೃಷ್ಟಿಯಿತ್ತು ಯೋಚಿಸ ತೊಡಗಿದೆ.. ಏನು ಕತೆ ಬರೆಯಲಿ?–ಪ್ರ–ಗ .ತಿ.. .ಶೀ.. .ಲ....ಅ.... ನು ದಿ. ನ. .ದ. ವಾ ತಾ. ವ.. .ರ ಣ ?

ಅಷ್ಟರಲ್ಲಿ ಸೀತೆಯ ಸವಾರಿ ಅಡಿಗೆ ಕೋಣೆಯಿಂದ ನನ್ನ ಕೋಣೆಗೆ ಆಗಮಿಸಿತು. ಬಂದವಳೇ ನನ್ನ ಯೋಚನಾಭರವಾದ ಜೀವವನ್ನು ಕಂಡು ಕ್ಷಣಕಾಲ ಕಲ್ಲುಗೊಂಬೆಯಂತೆ ತಟಸ್ಥಳಾದಳು.

ಕೊನೆಗೆಂದಳು "ಏನ್ರೀ, ಮೈಯಲ್ಲಿ ಚೆನ್ನಾಗಿಲ್ಲವೇ?"

ಮೇಜಿನ ಮೇಲಿಂದ ಕಾಲುಗಳನ್ನು ಕೆಳಗಿಳಿಸಲಿಲ್ಲ, ಬಾಯಿಯಿಂದ ಸಿಗರೇಟಿನ ತುಂಡನ್ನು ಹೊರಗೆಳೆಯಲಿಲ್ಲ! ದೃಷ್ಟಿಯನ್ನು ಮಾತ್ರ ಮಾಡಿನ ಹಂಚುಗಳಿಂದ ಕಿತ್ತು ಸೀತೆಯ ಮೇಲಿಟ್ಟೆ.

"ಹುಶ್–ಶ್–ಶ್!" ಅಂದೆ.

ಸೀತೆಗೆ ಮತ್ತಷ್ಟು ಅಚ್ಚರಿ! "ಏನ್ರೀ, ಬಟಾಟೆಯ ಕಾಯಿಹುಳಿ ತಿಂದದ್ದು ಹೊಟ್ಟೆಗೆ ಹಿಡಿಸಲಿಲ್ಲವೇನೋ? ವಾಯುಮಾತ್ರೆ ಇದೆ. ಜೀರಿಗೆ ಕಷಾಯದಲ್ಲಿ ತೇದು ಕೊಡಲೇ?"

ಪುನಃ "ಶ್–ಶ್–ಶ್!" ಅಂದೆ. ಸೀತಾ, ನೀನು ಒಳಗೆ ಹೋಗಿ ಮಕ್ಕಳೊಡನೆ ಆಟವಾಡು. ನನಗೊಂದು ಚಿಕ್ಕಕತೆ ಬರೆಯ ಬೇಕಾಗಿದೆ. ಕತೆಯ 'ಪ್ಲಾಟ್' ಯೋಚಿಸುತ್ತಾ ಇದ್ದೇನೆ. ದೇವರ ದಯೆಯಿಂದ ಮಣಗಟ್ಲೆ ಬಟಾಟೆಯನ್ನು ಜೀರ್ಣಿಸಿಕೊಳ್ಳುವ ಶಕ್ತಿ ಈ ಹೊಟ್ಟೆಯಲ್ಲಿದೆ." ಎಂದಂದು ಮಗದೊಮ್ಮೆ ದೃಷ್ಟಿಯನ್ನು ಸೀತೆಯ ಮೇಲಿಂದೆತ್ತಿ ಮಾಡಿನ ಹಂಚುಗಳೆಡೆಯಲ್ಲಿ ಸ್ಥಾಪಿಸಲುದ್ಯುಕ್ತನಾದೆ.

"ಇಶ್ಯಪ್ಪ!" ಅಂದಳು ಸೀತಾ. "ಬಟಾಟೆಯ ಕಾಯಿ ಹುಳಿತಿಂದದ್ದು

ಅಜೀರ್ಣವಾಯಿತೇನೋ ಎಂದೆಣಿಸಿದ್ದೆ. ದೃಷ್ಟಿ ಊರ್ಧ್ವವಾಗಿತ್ತು. ಕೈ ಕಾಲುಗಳು ನೆಟ್ಟಗಾಗಿದ್ದುವು. ಹೆದರಿಹೋದೆ," ಎಂದಂದು ಮುಂದೆ ಬಂದಳು. ಕುರ್ಚಿಯಬಳಿ, ನನ್ನ ಸನಿಯದಲ್ಲೇ ನಿಂದು, "ಏನ್ರೀ, ಕತೆ ಬರೆಯುತ್ತೀರಾ?" ಎಂದು ಪ್ರಶ್ನಿಸಿದಳು.

"ಹೂಂ" ಅಂದೆ. "ಪ್ರಗತಿಶೀಲವಾದ ಕತೆ. ನಮ್ಮ ಅನುನಿತ್ಯದ ವಾತಾವರಣದಿಂದ ತುಂಬಿರುವ ಕತೆ 'ಕರಾಳವಾಣಿ' ಪತ್ರಿಕೆಗೆ. ಪ್ರಥಮ ಬಹುಮಾನ ಒಂದು ಬಂಗಾರದ ಪದಕ!"

ಕ್ಷಣಕಾಲ ಯೋಚಿಸಿದಳು ಸೀತಾ. "ನನಗೂ ಒಂದು ಕತೆಯನ್ನು ಬರೆದು ಕಳುಹಿಸ ಬೇಕೆಂದಿದೆ" ಎಂದಳು.

ಈಗ ನಾನು ಅವಕ್ಕಾದೆ. ದಡಮ್ಮನೆ ಕುರ್ಚಿಯ ಮೇಲೆ ನೆಟ್ಟಗೆ ಕುಳಿತೆ. ಗಹಗಹಿಸಿ ನಕ್ಕೆ. "ನೀನು? ಕತೆ?" ಎಂದೆ.

ಸೀತೆಯೆಂದಳು. "ನಾನು ಕತೆಯಲ್ಲ. ನಾನು ಒಂದು ಕತೆಯನ್ನು ಬರೆದು 'ಕರಾಣವಾಣಿ'ಗೆ ಕಳುಹಿಸ ಬೇಕೆಂದಿದ್ದೇನೆ. ಏಕೆ? ನಾನು ಕತೆ ಬರೆಯ ಕೂಡದೇ?"

"ಓಹೋ, ಅವಶ್ಯವಾಗಿ. ಕನ್ನಡ ಏಳನೆಯ ಇಯತ್ತೆಯ ತನಕ ಕಾನ್ವೆಂಟಿನಲ್ಲಿ ಕಲಿತಿದ್ದಿ. ಏನಿಲ್ಲವಾದರೂ – 'ಟೀಚರು ಬರುತ್ತದೆ. ದನ ಹುಲ್ಲು ಮೇಯುತ್ತಾನೆ. ಅರ್ಜುನನು ದ್ರೌಪದಿಯನ್ನು ಮದುವೆ ಆದಳು' – ಎನ್ನುವಷ್ಟಾದರೂ ಕನ್ನಡ ಬರುತ್ತದೆ. ಬರೆ" ಅಂದೆ.

"ನೋಡ್ರಿ, ಹಾಸ್ಯಮಾಡಬೇಡಿ. ನಾನು ಖಂಡಿತವಾಗಿಯೂ ಕತೆಯನ್ನು ಬರೆದು ಕಳುಹಿಸುತ್ತೇನೆ." ಅಂದಳು ಸೀತಾ.

ನಾನೆಂದೆ. "ಬರೆಯಮ್ಮಣ್ಣಿ, ಬರೆಯು. ಆದರೆ ಈಗ ಕ್ಷಣಕಾಲ ಅಡಿಗೆ ಕೋಣೆಯಲ್ಲಿ ಕುಳಿತುಕೋ. ನೀನು ಇಲ್ಲಿಗೆ ಬಂದೆ ಎಂದರೆ ನನ್ನ ತಲೆ ಯೊಳಗಿನ ಯೋಚನೆಯೆಲ್ಲಾ ಗಾಳಿ ಪಾಲಾಗುತ್ತದೆ."

"ಅಂದಹಾಗೆ ನೆನಪಾಯಿತು. ನೋಡ್ರಿ, ಸಾಯಂಕಾಲಕ್ಕೆ ಭಗಿನೀ ಸಮಾಜದಿಂದ ನನ್ನ ಗೆಳತಿಯರಿಬ್ಬರು ಬರುತ್ತಾರೆ. ಮನೆಯಲ್ಲಿ ಕಾಫಿ ಹುಡಿ ಮುಗಿದಿದೆ. ಪೇಟೆಗೆ ಹೋಗಿ, ಸ್ವಲ್ಪ ಕಾಫಿ ಹುಡಿ ತಕ್ಕೊಂಡು ಬನ್ನಿ–ನಂತರ ನಿಮ್ಮ ಕತೆಯ ಯೋಚನೆ ಮಾಡಿ." ಅಂದಳು ಸೀತಾ.

ಎಲಾ ಗ್ರಹಾಚಾರವೇ! ಕತೆಗೆ "ಪ್ಲಾಟು" ಯೋಚಿಸುತ್ತಾ ಇದ್ದೇನೆ. ಇವಳ ಗೆಳತಿಯರಿಗೆ ಕಾಫಿ ಹುಡಿ ಆಗಬೇಕಂತೆ. ಏನು ಧಿಮಾಕು ಹುಡುಗಿಯದು? ಹೇಳಿದೆ. "ಸೀತಾ! ಕಾಫಿ ಇಲ್ಲದೆ, ನಿನ್ನ ಆ ಗೆಳತಿಯರು ನಮ್ಮ ಮನೆ ಜಗಲಿಯಲ್ಲೇ ಪ್ರಾಣ ಬಿಟ್ಟರೂ, ಪರವಾಯಿಲ್ಲ. ಅವರಿಗೆ ತಿಲತರ್ಪಣ ನನ್ನ ಲೆಕ್ಕದಲ್ಲಿ ಆದರೆ, ನಾನು ಕತೆಗೆ 'ಪ್ಲಾಟ್' ಯೋಚಿಸುವ ವರೆಗೂ, ಯೋಚಿಸಿದ 'ಪ್ಲಾಟ'ನ್ನು ಕಾಗದದ ಮೇಲೆ ಬರೆಯುವ ತನಕವೂ ಈ ಕುರ್ಚಿಯನ್ನು ಬಿಟ್ಟು ಅಲುಗುವುದಿಲ್ಲ" ಅಂದೆ

ಕ್ಷಣಕಾಲ ನನ್ನನ್ನು ದಿಟ್ಟಿಸಿದಳು ಸೀತಾ. ಪಿಟ್ಟೆನ್ನದೆ ಒಳ ನಡೆದಳು. ಸದ್ದೆನೆಂದುಕೊಂಡು ಪುನಃ ಪ್ರಗತಿಶೀಲ ಕತೆಯ ವಿಚಾರಕ್ಕೆ ತೊಡಗಿದೆ.

ಐದು ನಿಮಿಷ ಅಷ್ಟರಲ್ಲಿ ಪುನಃ ಸೀತೆಯ ಪ್ರವೇಶವಾಯಿತು ಕೈಯಲ್ಲಿ ನಮ್ಮ Latest edition ಅಂದರೆ ಹೊಸ ಆವೃತ್ತಿ ಅಂತಾರಲ್ಲ ಅದು. ಒಂದೂವರೆ ವರ್ಷದ ಗೀತಾ. ಸೀತಾ ಬಂದವಳೇ ಮಗುವನ್ನು ನನ್ನ ಕಾಲುಗಳ ಮಧ್ಯೆ ಕುಳ್ಳಿರಿಸಿ, "ಇದನ್ನು ನೋಡಿಕೊಳ್ಳಿ ನಾನು ಅಡಿಗೆ ಕೋಣೆ ಸಾರಿಸಿ, ದನಗಳಿಗೆ ಬೈಹುಲ್ಲು ಹಾಕಿ, ಬಟ್ಟೆಗಳನ್ನು ಒಗೆದು ಒಣಗಹಾಕಿ, ಈಗ ಬರುತ್ತೇನೆ" ಅಂದಳು

ಕಾತರನಾಗಿ, "ಈಗ ಅಂದರೆ?" ಅಂದೆ

"ಕಡಿಮೆಯಾದರೂ ಎರಡು ಗಂಟೆಗಳಾದರೂ ಹಿಡಿದೀತು ನನ್ನ ಕೆಲಸಕ್ಕೆ!" ಅಂದಳು

ಎರಡು ಗಂಟೆ! ಈ ತಂಟೆಕೋರ ಹುಡುಗಿ ಗೀತೆಯೊಡನೆ! ಪರಮಾತ್ಮಾ!

ಚಟ್ಟನೆ ಎದ್ದು ಗೀತೆಯನ್ನು ಸೀತೆಯ ಕೈಗೆ ಕೊಟ್ಟೆ. "ಮಗುವನ್ನು ನೀನೇ ಹಿಡಕೋ. ಅಂಗಡಿಗೆ ಹೋಗಿ, ಕಾಫಿಹುಡಿ ತರುತ್ತೇನೆ." ಅಂದು ಅಂಗಿಯನ್ನು ಹಾಕಿಕೊಂಡು ಟೋಪಿಯನ್ನು ಇಟ್ಟುಕೊಂಡು ಹೊರಟೆ.

× × × ×

ಬ್ರಹ್ಮನ ಕೈವಾಡ ನೋಡಿ!

ಏನು ಅವನ ತಲೆ! ಹೇಗೆ ಅವನ ಮೇಧಾಶಕ್ತಿ!!

ಮಾನವನು ಇತರ ಎಲ್ಲಾ ಪ್ರಾಣಿಗಿಂತ ಶ್ರೇಷ್ಠನಂತೆ! ಏನು ಶ್ರೇಷ್ಠ

ತೆಯೋ? ಮಂಗನಿಗಿರುವಷ್ಟು ಚುರುಕುತನ ಮಾನವನಿಗಿಲ್ಲ. ಕತ್ತೆಗೆ ಇರುವಷ್ಟು ಸಹನಶೀಲತೆ ಮನುಷ್ಯನಲ್ಲಿಲ್ಲ. ನಾಯಿಯಲ್ಲಿರುವ ಪ್ರಾಮಾಣಿಕತೆ ಮನುಷ್ಯವರ್ಗಕ್ಕೇನೇ ಇಲ್ಲ. ಗೋವಿಗಿರುವಷ್ಟು ಪರೋಪಕಾರಭಾವ ಮಾನವನಲ್ಲಿಲ್ಲ. ಇನ್ನು ಹಂದಿಯಂತೆ "ಡುರುಂಕ್" ಗೊಟ್ಟಾನೇ? ಸಾಧ್ಯ ವಿಲ್ಲ. ಆನೆಯಂತೆ ಬಲ? ಮಾತೆತ್ತಬೇಡಿ. ಹುಲಿಯಂತೆ ಗರ್ಜನೆ? ಬಾರದು. ಸಿಂಹದ ಸ್ಥೈರ್ಯ? ಕನಸಿನಲ್ಲೂ ಇಲ್ಲ. ಅದೆಲ್ಲಾ ಸಾಯಲಿ; ಅತಿ ಚಿಕ್ಕ ಪ್ರಾಣಿ ಇರುವೆಯಂತಹ ಮುಂದಾಲೋಚನೆಯಾದರೂ ಇದೆಯೇ? ಸಿಕ್ಕಿದ ಧಾನ್ಯಗಳ ಕಣಗಳನ್ನು ಒಂದೊಂದಾಗಿಯೇ ಒಯ್ದು, ಗೂಡಿನಲ್ಲಿ ಶೇಖರಿಸಿ, ಮುಂಬರುವ ದಿನಗಳಿಗಾದೀತೆಂಬ ಮುಂದಾಲೋಚನೆ ಇರುವೆಗಳಿಗಿದೆ. ಆದರೆ ಇಂದು ಸಿಕ್ಕಿದುದನ್ನು ಇಂದೇ ತಿಂದು ಮುಗಿಸಿ, ತೆಪ್ಪಗೆ ಕೈ ಝಾಡಿಸಿ, ಕುಳಿತುಕೊಳ್ಳುವ ಮಾನವನಿಗೆ ಮುಂದಿನ ಯೋಚನೆ ಎಲ್ಲಿಂದ ಬಂತು. ಇಷ್ಟೆಲ್ಲ ಆಗಿಯೂ ಮಾನವನೆಂದರೆ ಜಗತ್ತಿನ ಎಲ್ಲಾ ಸಜೀವ ಜಂತುಗಳೊಳಗೆ ಬಹಳ ಶ್ರೇಷ್ಠವಾದ ಪ್ರಾಣಿಯಂತೆ! ಶ್ರೇಷ್ಠವನ್ನೂ ಬಹಳವನ್ನೂ ಬಿಟ್ಟರೆ, ಮಾನವನು ಒಂದು ಪ್ರಾಣಿಯೆಂಬುದು ಯಾರೂ ಒಪ್ಪಬೇಕಾದ ನಿರ್ವಿವಾದ ವಾದ ಮಾತು.

ಇನ್ನು ಮಾನವರಲ್ಲಿಯೋ?

ಎರಡು ಜಾತಿಗಳು – ಗಂಡಸು ಮತ್ತು ಹೆಂಗಸು! ಇವುಗಳಲ್ಲಿಯೂ ಗಂಡಸೆಂದರೆ ಮೇಲಂತೆ! ಹೆಂಗಸೆಂದರೆ ಕೀಳಂತೆ! ಪುರುಷನೆಂದರೆ ಸಬಲನಂತೆ, ಸ್ತ್ರೀಯೆಂದರೆ ಅಬಲೆಯಂತೆ! ಪುರುಷನಿಗೆ ಮನೆಯಿಂದ ಹೊರಬಿದ್ದು, ಇಡೀ ಜಗತ್ತನ್ನೇ ಬೇಕಾದರೂ, ಆಳುವಷ್ಟು ಶಕ್ತಿಯಿದೆ. ಸ್ತ್ರೀಗಾದರೋ ಮನೆಯೊಳಗೆ ಇದ್ದುಕೊಂಡು ಅಡಿಗೆ ಕೋಣೆಯ ಪಾರುಪತ್ಯಗಾರಿಕೆಯನ್ನು ನಿರ್ವಹಿಸಿ, ಅದೇ ಕೋಣೆಯ ಒಂದು ಮೂಲೆಯಲ್ಲಿ ಕುಕ್ಕರಿಸಬೇಕಾಗಿದೆ. ಇದನ್ನು ಹೇಳುತ್ತಿರುವ ನಾನೂ ಪುರುಷನೇ! ಸ್ತ್ರೀ ಅಲ್ಲ. ಆದ್ದರಿಂದ ಇಷ್ಟು ಹೇಳಿದೆನೆಂದು ಊರಿನ ಸ್ತ್ರೀಯರೆಲ್ಲಾ ಕೈಲಿ ಕಸಬರಿಕೆಯನ್ನು ಹಿಡಿಯಬೇಕಾದುದಿಲ್ಲ. ಯಾಕೆಂದರೆ ನನಗಿಂತ ಮೊದಲು – ಸೃಷ್ಟಿಯ ಆದಿಯಲ್ಲಿ – ಶಾಸ್ತ್ರಕಾರರೇ ಹೇಳಿಬಿಟ್ಟಿದ್ದಾರೆ. "ಬಾಲ್ಯದಲ್ಲಿ ತಂದೆಯು, ಯೌವನದಲ್ಲಿ ಗಂಡಸು, ವೃದ್ಧಾಪ್ಯದಲ್ಲಿ ಮಗನೂ ಈ ಸ್ತ್ರೀಯರ ರಕ್ಷಣೆ ಮಾಡಬೇಕಾಗಿದೆ" – ಎಂದು.

ಶಾಸ್ತ್ರಕ್ಕೂ ಸೃಷ್ಟಿಗೂ ಬ್ರಹ್ಮನೇ ಆಧಾರನೆಂದ ಮೇಲೆ – ಬ್ರಹ್ಮ ಸೃಷ್ಟಿಯಾದ ಈ ಜಗತ್ತಿನಲ್ಲಿ ಪ್ರಾಣಿಗಳೊಳಗೆ ಮಾನವನೇ ಉತ್ತಮ, ಮಾನವರಲ್ಲಿ ಸ್ತ್ರೀಗಿಂತ ಪುರುಷನೇ ಮೇಲು – ಎಂಬುದು ಬ್ರಹ್ಮನ ವಾಕ್ಯವಾಯಿತಲ್ಲ! ಈ ವಿಷಯದಲ್ಲಿ ಸ್ತ್ರೀಯರಿಗೆ ಎಷ್ಟು ಮತ್ಸರವಿದ್ದರೂ, ನಮಗೆ ಪುರುಷರಿಗಂತೂ ಮೇಲಿನ ವಾಕ್ಯವೆಂದರೆ ವೇದವಾಕ್ಯ. ನಾವು ಹಾಳಾಗಿ ಹೋದರೂ, ವೇದವಾಕ್ಯಕ್ಕೆ ಮಿಥ್ಯಾವಾದ ಬರಲಾರದು. ಆದರೆ

ಅದಕ್ಕೇನೇ ಮೊದಲೇ ಅಂದೆ – ಬ್ರಹ್ಮನ ಮೇಧಾಶಕ್ತಿ ನೋಡಿ – ಅಂತ. ಮಹಾಮೇರು ಮಂಡಿತವಾದ ಈ ಧರಣಿ ಮಂಡಲವನ್ನೂ ಸಪ್ತಸಾಗರಾಂತ ಗತ ಬ್ರಹ್ಮಾಂಡ ಭಾಂಡವನ್ನೂ ರಚಿಸಿದ ಆ ಬ್ರಹ್ಮನೆಂಬ ಕುಂಬಾರನ ಮಂಡೆಯೇ? ಭಳಿರೇ ಅನ್ನಬೇಕು. ಮೆಚ್ಚಬೇಕು. ಯಾಕೆ?

ಸಶಕ್ತರೂ ಸಬಲರೂ ಆದ ನಾವು – ಪುರುಷರು ಅಬಲೆಯರೆಂದೆನಿಸಿ ಕೊಂಡ ಸ್ತ್ರೀಯರಿಗೆ ಒಗ್ಗಬೇಕಾಗಿದೆ. ಕಲಿಯುಗದ ಮಹಿಮೆಯೋ ಏನೋ ತಿಳಿಯದು. ಕಂಕಣಗಳ ಕಿಂಕಿಣಿರವ ಕೇಳಿದೊಡನೆ ಕಣ್ಮುಚ್ಚಿ, ಧ್ಯಾನಾಸಕ್ತನಾದ ಪುರುಷನು ಕಣ್ಣು ತೆರೆಯುತ್ತಾನೆ. ಕಿವಿಗಳು ನೆಟ್ಟಗಾಗುತ್ತವೆ, ಮೈ ನವಿ ರೇಳುತ್ತದೆ, ಧ್ಯಾನವೇ ಆಕೆಯದಾಗುತ್ತದೆ. ಆಕೆಯು ಸಿಗುವವರೆಗೂ ಮನಸ್ಸಿಗೆ ತೃಪ್ತಿಯಿಲ್ಲ ಕೊನೆಗೆಂದಾದರೂ – ಸಿಕ್ಕಿದಳೆಂದೇ ಇಟ್ಟುಕೊಳ್ಳೋಣ. ವಿವಾಹವಾಯಿತು. ತನ್ನ ಮನದಿನಿಯೇ ಸಿಕ್ಕಿದಳು. ಇನ್ನು ಸಂತೋಷವಾಗಿರ ಬೇಡವೇ? ಮನಸ್ಸು ನೆಮ್ಮದಿಯಲ್ಲಿರಬೇಡವೇ? ಸಂತೋಷವಿತ್ತು, ನೆಮ್ಮದಿ ಇತ್ತು. ಬರೇ ನಾಲ್ಕು ದಿನಗಳು ಮಾತ್ರ. ಮದುವೆಯಾಗಿ ಗಂಡನ ಮನೆಗೆ ಬಂದ ಹುಡುಗಿ ಗಂಡನ ಮನೆಯಲ್ಲಿ ನಾಲ್ಕು ದಿನ ಹೇಳಿದಂತೆ ಕೇಳಿದಳು. ಮನೆಯ ಗುರುತು ಪರಿಚಯವಾಯಿತು. ಗಂಡನ ಸ್ವಭಾವ ತಿಳಿಯಿತು. ನಂತರ ಐದನೇ ದಿನದಿಂದ ಗಂಡನಿಗೆ " ಏಳು – ಕೂರು " ನಡೆಯಲಾರಂಭ. " ಸಾವಿರ ಕುದುರೆಯ ಸವಾರನಾದರೂ, ಮನೆಯ ಹೆಂಡತಿಗೆ ಕಾಸ್ತಾರ!" ಅಂತ ಕೂಗಿದ್ದನಂತೆ ಕವಿ. ಅಂತೆಯೇ!

ಇಷ್ಟಾಗಿಯೂ ಮಾನವ ಜಾತಿ ಶ್ರೇಷ್ಠವಂತೆ! ಸ್ತ್ರೀಯರಿಗಿಂತ ಪುರುಷರು ಶ್ರೇಷ್ಠರಂತೆ! ಏನು ಗ್ರಹಗತಿ!

× × × ×

ಮಧ್ಯಾಹ್ನದಲ್ಲಿ ಒಂದರೆತಾಸು ಹಾಸಿಗೆಯ ಮೇಲೆ ಹಾಯಾಗಿ ಬಿದ್ದು ಚಿಕ್ಕದೊಂದು ನಿದ್ದೆ ಮಾಡುವ ಅಭ್ಯಾಸ ನನಗೆ

ಪೇಟೆಯಿಂದ ಮರಳಿದವನು, ಕಾಫಿ ಹುಡಿಯ ಕಟ್ಟನ್ನು ಸೀತೆಯೆದುರು, ಬಿಸುಟು "ಇಗೋ ನಿನ್ನ ಕಾಫಿ ಹುಡಿ ಇದರ ಕಾಫಿಯನ್ನು ಕುಡಿದು ನಿನ್ನ ಆ ಗೆಳತಿಯರು ಸಂತುಷ್ಟರಾಗಲಿ. ನಿಮ್ಮ ಹಿರಿಯರಿಗೆಲ್ಲಾ ಮೋಕ್ಷ ಸಿಗಲಿ. ನಾನು ಮಲಗುತ್ತೇನೆ, ನನ್ನನ್ನು ಎಬ್ಬಿಸಬೇಡ ಜಾಗ್ರತೆ!" ಇಷ್ಟನ್ನೂ ಒಂದೇ ಉಸಿರಲ್ಲಿ ಹೇಳಿ, ಮುಗಿಸಿ ಕೋಣೆಗೆ ಹೋಗಿ, ಮಂಚದ ಮೇಲೆ ಬಿದ್ದುಕೊಂಡೆ.

ಬಿದ್ದುಕೊಂಡಲ್ಲೇ ಯೋಚಿಸ ತೊಡಗಿದೆ ಪ್ರಗತಿಶೀಲವಾಗಬೇಕು? ಅನುದಿನ ವಾತಾವರಣ ಇರಬೇಕು? ರಾಮಾಯಣದಿಂದಲೋ ಮಹಾಭಾರತದಿಂದಲೋ ಕದ್ದರೆ ಅದು ಪ್ರಗತಿಶೀಲವಾಗಲಿಕ್ಕಿಲ್ಲ. ವೆಂಕುವು ಪಣಂಬೂರಿಗೆ ಹೋದ ಕತೆ ಬರೆದರೆ ಅಜ್ಜಿ ಕತೆಯಾದೀತು. ಹಾಗಾದರೆ ಹೇಗೆ? ಪ್ರಗತಿಶೀಲ?. ಹೂಂ ಹೀಗೆ ಬರೆಯೋಣ. ದೂಮನೊಬ್ಬ ಬೀಡಿ ಕಟ್ಟುವವ. ದೊಡ್ಡದೊಂದು ಬೀಡಿ ಕಾರ್ಖಾನೆಯಲ್ಲಿ ಕೆಲಸದಲ್ಲಿದ್ದಾನೆ. ಅವನಿಗೆ ಈ ವರ್ಷದಲ್ಲಿ ಬೋನಸ್ಸು ಇದೇ ತಿಂಗಳ ಕೊನೆಯಲ್ಲಿ ಸಿಕ್ಕುವುದಾಗಿದೆ ಆ ಬೋನಸ್ಸಿನಲ್ಲಿ ಧೈರ್ಯದಿಂದಲೇ ಅವನ ಹೆಂಡತಿ ಒಂಬತ್ತು ತಿಂಗಳ ಹಿಂದೆ ಗರ್ಭಿಣಿಯಾಗಿ, ಇಂದೋ ನಾಳೆಯೋ ಹೆರುವವಳಿದ್ದಾಳೆ. ಅವಳ ಹೆಸರು? ಸಾವಿತ್ರಿ – ಪದ್ಮಾವತಿ ಎಂಬ ಹೆಸರಿಟ್ಟರೆ ಚೆನ್ನಾಗಲಾರದು. ರುಕ್ಕು ಎಂದೇ ಇಡೋಣ. ಅಕಸ್ಮಾತ್ ಬೀಡಿ ಕಾರ್ಖಾನೆಯಲ್ಲಿ ಮುಷ್ಕರ ಪ್ರಾರಂಭವಾಯಿತು. ಬೀಡಿ ಕಟ್ಟುವ ಮಜೂರಿಯ ದರವನ್ನು ತಗ್ಗಿಸಿದ ಬಗ್ಗೆ! ಮುಷ್ಕರದಲ್ಲಿ ದೂಮನಿಗೆ ಭಾಗವಿತ್ತು. ಕಾರ್ಖಾನೆಯನ್ನು ಮುಚ್ಚಿದರು. ಊರ ಬೀದಿ ಬೀದಿಗಳಲ್ಲಿ – ಸಂದುಗೊಂದುಗಳಲ್ಲಿ ಪ್ರಚಂಡ ಮೆರವಣಿಗೆಗಳಾದವು ಊರ ಮೈದಾನದಲ್ಲಿ ಪ್ರಚಂಡ ಸಭೆಗಳು ಜರಗಿದವು "ಕಾರ್ಖಾನೆಯ ಬಾಗಿಲು ತೆರೆಯಲೇ ಬೇಕು. ಕೂಲಿಯ ದರ ಏರಿಸಲೇ ಬೇಕು. ಬೋನಸ್ಸು ಸಿಗಲೇ ಬೇಕು." ಎಂದು ಉದ್ದುದ್ದ ಭಾಷಣಗಳಾದವು. ಆದರೆ ದೂಮನ ಕೆಲಸ ಹೋಯಿತು. ಕೆಲಸವೇ ಹೋಯಿತೆಂದ ಮೇಲೆ ಬೋನಸ್ಸು ಎಲ್ಲಿಂದ? ಬೋನಸ್ಸಿನ ಧೈರ್ಯದಿಂದ ಗರ್ಭಿಣಿಯಾದ ರುಕ್ಕು ಬೋನಸ್ಸಿನ ಮೊದಲೇ

ಹೆತ್ತಳು. ಹೆತ್ತಳು ಮಾತ್ರವೇ? ಅವಳಿ – ಜವಳಿ ಮಕ್ಕಳನ್ನು! ಅವಳಿ – ಜವಳಿ ಮಕ್ಕಳು ಮಾತ್ರವೇ? ಹೆತ್ತ ಮೂರನೇ ದಿನವೇ ಜ್ವರ ಆರಂಭ ವಾಯಿತು. ಮದ್ದಿಗೆ ಕೊಡಲು ಕಾಸಿಲ್ಲ. ದುಡ್ಡಿಲ್ಲದ ರೋಗಿಯನ್ನು ಕಂಡ ಕೂಡಲೇ ಡಾಕ್ಟರರು ಅಂತರ್ಮುಖರಾಗುತ್ತಾರೆ ಹತ್ತು ವರ್ಷಗಳಿಂದ ಕಾರ್ಖಾನೆಯಲ್ಲಿ ಕೆಲಸ ಮಾಡಿದ್ದೇನೆ. ಒಂದೆರಡು ರೂಪಾಯಿ ಸಾಲ ಪಡಕೊಳ್ಳೋಣವೆಂದು ಹೋದರೆ, ಕಾರ್ಖಾನೆಯ ಒಡೆಯ ದೂಮನ ಮೇಲೆ ನಾಯಿಯನ್ನು ಬಿಡಬೇಕೇ? ಛೆ ಎಂತಹ ಬಾಳು? ಭಾರವಾದ ಹೆಜ್ಜೆಗಳಿಂದ ಮನೆಯನ್ನು ಪ್ರವೇಶಿಸುವಾಗ ಅವಳಿ – ಜವಳಿ ಮಕ್ಕಳ ಆರ್ಭಟೆ ಕೇಳಿಸುತ್ತದೆ. ತಾಯಿ ಮಲಗಿದ್ದಾಳೆ. ಇಬ್ಬದಿಗಳಲ್ಲೂ ಎರಡು ಮಕ್ಕಳು ಕೂಗುತ್ತಿವೆ. ರುಕ್ಕೂ ಎಂದು ಕರೆದರೂ ಮಾತನಾಡಲೊಲ್ಲಳು. ಮುಟ್ಟಿದರೆ ಮೈ ಮಂಜಿನಂತೆ ತಣ್ಣಗಾಗಿದೆ ರುಕ್ಕು ಎಂದೋ ಸಮತಾವಾದಿ ಸ್ವರ್ಗಕ್ಕೆ ಹೋಗಿದ್ದಾಳೆ ಇಷ್ಟು ಯೋಚಿಸುತ್ತಿರುವಾಗ್ಯೆ ನಿದ್ರಾದೇವಿಯ ಸಾಕ್ಷಾತ್ಕಾರವಾಯಿತು.

× × × ×

ಎಚ್ಚರವಾಗುವಾಗ್ಯೆ, ಚಾವಡಿಯಲ್ಲೇನೋ ಗಲಭೆ ಕೇಳಿಸುತ್ತಿದೆ. ಸೀತೆಯ ಹಾಗೂ ಅವಳ ಗೆಳತಿಯರು ಕಾಫಿ ಕುಡಿಯುತ್ತಿರುವ ಸಂಭ್ರಮ. ನಾನು ಎದ್ದೇಳಲಿಲ್ಲ. ಸೀತೆ ಮತ್ತು ಅವಳ ಗೆಳತಿಯರ ನಡುವೆ ನನಗೇನು ಪ್ರವೇಶ? ಕಣ್ಣು ಮುಚ್ಚಿಯೇ ಬಿದ್ದುಕೊಂಡೆ.

ಕಾಫಿ ಕುಡಿದು ಆಯಿತೆಂದು ತೋರುತ್ತದೆ. ಗೆಳತಿಯರು ಹೋಗಲು ಹೊರಟರು. ಒಬ್ಬ ಗೆಳತಿಯು ಕೇಳಿದಳು. "ಹಾದೆನೇ ಸೀತಾ, ನಿನ್ನ ಗಂಡನೆಲ್ಲಿ?"

ಸೀತೆಯೆಂದಳು. "ಅವರು ಮಲಗಿದ್ದಾರೆ."

ಆಗ ಇನ್ನೊಬ್ಬ ಗೆಳತಿಯೆಂದಳು "ಮಾಲತಿ, ಸೀತೆಯ ಗಂಡನನ್ನು ಭೇಟಿಯಾಗುವ ಅವಶ್ಯವಿಲ್ಲ ನಿನಗೆ ಇಂಗ್ಲಿಷಿನಲ್ಲಿ ಏನೋ Nonentity ಅನ್ನುತ್ತಾರಲ್ಲ ಅದೇ ರೀತಿ ಅವಳ ಪತಿದೇವರು! ಪುಣ್ಯಕ್ಕೆ ಬ್ರಹ್ಮನು ಇಬ್ಬರಿಗೂ ಸಾಕಾಗುವಷ್ಟು ಮೆದುಳನ್ನು ಸೀತೆಯೊಬ್ಬಳಿಗೇನೇ ಕೊಟ್ಟಿದ್ದಾನೆ. ಆದುದರಿಂದ ಲೇಸಾಗಿದೆ" ಅಂದಳು.

ಎಲ್ಲರೂ ನಕ್ಕರು. ಗೆಳತಿಯರು ನಕ್ಕರೆ ನಕ್ಕರು. ಅದರೊಂದಿಗೆ ಸೀತೆಯೂ ನಗಬೇಕೇ? ಏನು ಸೊಕ್ಕು ಸೀತೆಗೆ.

× × × ×

ಇಡೀ ದಿನ ಅದೇ ಕೊರೆಯುತ್ತಾ ಇತ್ತು ಮನದಲ್ಲಿ!

ರಾತ್ರೆ ಊಟ ತೀರಿಸಿ ಮಲಗಿಕೊಂಡರೂ ನಿದ್ದೆ ಬಾರದು. ಸೀತೆಗೆ, ನಿದ್ದೆಯೆಂದರೆ ಎಣಿಸಿದಾಗ ಹಾಜರಿ ಕೊಡುವಂತೆ ನನಗಾದರೋ

ನಾನು Nonentity? ನನ್ನ ತಲೆಯಲ್ಲಿ ಮೆದುಳೇ ಇಲ್ಲ? ನನ್ನ ಬಾಬ್ತು ಮೆದುಳನ್ನು ಬ್ರಹ್ಮನು ಸೀತೆಗೆನೇ ಕೊಟ್ಟಿದ್ದಾನೆ? ಛೆ ಎಂತಹ ಅವಮಾನ. ಕೂಡದು. ನನ್ನ ಮೆದುಳಿನ ಶ್ರೇಷ್ಠತೆಯನ್ನು ಸೀತೆಗೆ ತೋರಿಸಲೇ ಬೇಕು! "ಕರಾಳವಾಣಿಯ" ಸ್ಪರ್ಧೆಗೆ ಸೀತೆಯೂ ಕತೆಯನ್ನು ಕಳುಹಿಸುವೆನೆಂದಿದ್ದಾಳೆ. ಕಳುಹಿಸಲಿ. ನಾನು ಉತ್ತಮವಾಗಿ ಕತೆಯನ್ನು ಬರೆದು, ಪ್ರಥಮ ಬಹುಮಾನವನ್ನು ಹೊಂದಬೇಕು. ಅದು ಪ್ರಕಟವಾದ "ಕರಾಳವಾಣಿಯ" ಪ್ರತಿಯನ್ನು ಸೀತೆಯ ಒಬ್ಬ ಗೆಳತಿ ಮಾಲತಿಗೂ, ಇನ್ನೊಬ್ಬಳು ಗೆಳತಿ ಶೂರ್ಪನಖಿಗೂ ಕಳುಹಿಸಬೇಕು. ಸೀತೆಯ ಮುಖಭಂಗವನ್ನು ಮಾಡಬೇಕು.

ದೃಢ ಮನಸ್ಕನಾಗಿ ಹಾಸಿಗೆಯಿಂದೆದ್ದೆ. ದೀಪವನ್ನುರಿಸಿದೆ. ಮೇಜಿನೆದುರು ಕುರ್ಚಿಯಲ್ಲಿ ಕುಳಿತೆ. ಕಾಗಳಗಳನ್ನೂ ಮಸಿಕುಪ್ಪಿಯನ್ನೂ ಪೇನಾಗಳನ್ನೂ ಬಳಿಗೆಳೆದೆ. ಬರೆಯಲಾರಂಭಿಸಿದೆ.

ಆರಂಭಿಸಿದೆ ಮಾತ್ರವಲ್ಲ, ಬರೆದು ಮುಗಿಸಿದೆ. ರಾತ್ರೆ ಹನ್ನೆರಡು ಗಂಟೆ ಮೀರಿ ಹೋಗಿತ್ತು!

× × × ×

ಮರುದಿನ ಬೆಳಿಗ್ಗೆ ಆಫೀಸಿಗೆ ಹೊರಡುವಾಗ ಸೀಳಿದೆ. "ಸೀತಾ ಇದೋ. ನಾನೊಂದು ಕತೆಯನ್ನು ಬರೆದಿದ್ದೇನೆ. ಪ್ರಗತಿಶೀಲ ಕತೆ. ಅನುದಿನದ ವಾತಾವರಣ ಉಳ್ಳದ್ದು. ಹೆಸರು–'ದೂಮನ ಬೋನಸ್ಸು!'–ಎಂದು. ಇಂದೇ 'ಕರಾಳವಾಣಿ'ಗೆ ಕಳುಹಿಸುತ್ತೇನೆ."

"ನೋಡೋಣ್ರೀ, ನಾನು ಆ ಕತೆಯನ್ನು ಓದಿಕೊಳ್ಳುತ್ತೇನೆ. ಅನಂತರ ಕಳುಹಿಸಬಹುದು" ಅಂದಳು.

"ಛೆ, ಇವತ್ತು ಕಳುಹಿಸದಿದ್ದರೆ ವಿಳಂಬವಾದೀತು. ಅದು ಪ್ರಕಟವಾಗಿ ಬಂದನಂತರ ನೀನು ಓದು" ಅಂದೆ.

"ಹಾಗೇನ್ರೀ ನಿಮ್ಮ ಅವಸರ? ಇಂದೇ ಕಳುಹಿಸಬೇಕಾಗಿದ್ದರೆ ಕಳುಹಿಸೋಣ. ನನಗೆ ಹತ್ತು ಗಂಟೆಗೆ ಭಗಿನೀ ಸಮಾಜಕ್ಕೆ ಹೋಗಲಿದೆ. ಹೋಗುವಾಗ್ಯೆ ಹಾದಿಯಲ್ಲೇ ಪೋಸ್ಟಾಫೀಸು ಇದೆ. ಕಳುಹಿಸುತ್ತೇನೆ ನಾನೇ" ಅಂದಳು. "ಅಲ್ಲದೆ, ನಿಮ್ಮ ಕತೆಯ 'ಪ್ಲಾಟ'ನ್ನೇನೂ ನಾನು ಕದ್ದುಕೊಳ್ಳುವುದಿಲ್ಲ ನನ್ನ ಕತೆಗಾಗಿ!"

"ಅಷ್ಟಾದರೆ ಸರಿ. ನಿನ್ನ ಕತೆ ಬರೆದಾಯಿತೇ?" ಎಂದು ಕೇಳಿದೆ.

ಸೀತೆಯೆಂದಳು. "ಇಲ್ಲಾ, "ಪ್ಲಾಟ್" ಯೋಚಿಸಿಟ್ಟಿದ್ದೇನೆ. ಭಗನೀ ಸಮಾಜದಲ್ಲಿ ಕುಳಿತು ಬರೆಯುತ್ತೇನೆ" ಅಂದಳು

ಬರೆದ ಕತೆಯನ್ನು ಸೀತೆಗೆ ಕೊಟ್ಟು, ಆಫೀಸಿಗೆ ತೆರಳಿದೆ.

ಸಾಯಂಕಾಲ ಮನೆಗೆ ಬಂದೊಡನೆ ಸೀತೆಯೊಡನೆ ಕೇಳಿದೆ. "ಹೌದೇನೇ, ಕತೆಯನ್ನು ಕಳುಹಿಸಿದೆಯಾ?"

"ಹೌದು, ರಿಜಿಸ್ಟರ್‌ಮಾಡಿ ಕಳುಹಿಸಿದ್ದೇನೆ." ಅಂದದ್ದೇ ರಶೀದಿಯನ್ನು ತೋರಿಸಿದಳು.

ಕೊನೆಯ ಕಾಲಕ್ಕೂ ಎಲ್ಲಾದರೂ ಚಕ್ಕರ್ ಕೊಡುವಳೋ ಎಂದೆಣಿಸಿದ್ದೆ ಇಲ್ಲ. ರಿಜಿಸ್ಟರ್ ರಶೀದಿ ತಂದಿದ್ದಾಳೆ. ಮನಸ್ಸು ಸ್ವಲ್ಪ ಹಗುರವಾಯಿತು. ಕೇಳಿದೆ "ನಿನ್ನ ಕತೆಯೋ?"

"ಅದನ್ನು ಬರೆದು ಕಳುಹಿಸಿರುತ್ತೇನೆ."

"ಹೆಸರು?"

"ಬಡವರ ಬಾಳು!"

ಹ್ಞ ಬಡವರ ಬಾಳು! ಇವಳಿಗೇನು ಮಹಾ ತಿಳಿದಿದೆ, ಬಡವರ ಬಾಳಿನ ವಿಷಯ? ಏನೋ ಅಜ್ಜಿ ಕತೆ ಬರೆದಿರಬೇಕು.

ಮನಸ್ಸಿನಲ್ಲಿ ಮಂಡಿಗೆಯನ್ನು ತಿನ್ನುತ್ತಾ, ಮುಂದಿನ ತಿಂಗಳ ಒಂದನೇ ದಿನಾಂಕವನ್ನು ಜಾತಕ ಪಕ್ಷಿಯಂತೆ ನಿರೀಕ್ಷಿಸತೊಡಗಿದೆ. ಅದೇ ದಿನ

"ಕರಾಳವಾಣಿ"ಯ ಸಂಚಿಕೆಯೂ ಸ್ಪರ್ಧೆಯ ಫಲಿತಾಂಶವೂ ತಿಳಿಯ ಬರುವುದಿತ್ತು!

× × × ×

ತಿಂಗಳು ದಾಟಿತ್ತು ಮತ್ತು ತಿಂಗಳ ಒಂದನೇ ದಿನಾಂಕವೂ ಉದಯಿಸಿತು.

ಅಡಿಗೆ ಕೋಣೆಯಲ್ಲಿ ಕಾಫಿ ತೀರಿಸಿ, ಹೊರ ಜಗುಲಿಗೆ ಬರುವಾಗ ಪೋಸ್ಟ್‌ಮ್ಯಾನ್ ಹಾಜರಿ

"ರಾಯರೇ, ಪೋಸ್ಟ್!' ಅಂದ

ಆನಂದದಿಂದ ಇಸಕೊಂಡೆ ಒಂದು ಪತ್ರ, ಮತ್ತೊಂದು "ಕರಾಳ ವಾಣಿ!"

ಲಕೋಟೆಯ ಮೇಲಿದ್ದ ವಿಳಾಸವನ್ನು ಓದಲಿಲ್ಲ ಒಳಗಿನ ಪತ್ರವನ್ನು ಬಿಡಿಸಿದೆ.

"ಶ್ರೀಮತಿ ಸೀತಾದೇವಿಯವರಿಗೆ – ವಂದನೆಗಳು.

ತಮ್ಮ ಕತೆ 'ಬಡವರ ಬಾಳು!' – ನಮ್ಮ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಹೊಂದಿದೆಯೆಂದು "

ಮುಂದೇನು ಓದಲಿ? ಆಕಾಶದಲ್ಲಿ ಕಟ್ಟಿದ ನನ್ನ ಗೋಪುರವು ಮಣ್ಣು ಪಾಲಾಯಿತು. ಸೀತೆಯೇ ಗೆದ್ದಳು ಸೀತೆಯ ಮೆದುಳೇ ನನ್ನ ಮೆದುಳಿಗಿಂತ ಉತ್ತಮವಾಯಿತು

ಒಂದು ಕಡೆ ನಾನು ಸೋತುದಕ್ಕೆ ದುಃಖ ಇನ್ನೊಂದೆಡೆ ಸೀತಾ ಗೆದ್ದುದಕ್ಕೆ ಸಂತಾಪ!

ಈ ದುಃಖ ಸಂತಾಪಪೂರ್ಣ ಹೃದಯದಿಂದ "ಕರಾಳ ವಾಣಿ"ಯನ್ನು ಬಿಡಿಸಿದೆ.

ನೋಡಲೇನು?

"ಬಡವರ ಬಾಳು! – ಬರೆದವರು: ಶ್ರೀಮತಿ ಸೀತಾದೇವಿ."

ಅಯ್ಯಯ್ಯೋ ...

ಮುಂದೆ ಓದಿದೆ. .

ಏನಿದು? ದೂಮನ ಕತೆಯೇ? ದೂಮನ ಹೆಂಡತಿ ರುಕ್ಕುವೇ? ದೂಮನು ಬೀಡಿ ಕಟ್ಟುವ ಕೂಲಿಯಾಳೇ?

ಎಂತಹ ಕೃತಿ ಚೌರ್ಯ! ನಾನು ಬರೆದ “ದೂಮನ ಬೋನಸ್ಸು” ಎಂಬ ಕತೆಯ ಹಸರನ್ನು “ಬಡವರ ಬಾಳು!” ಎಂದು ಮಾರ್ಪಡಿಸಿ, ತನ್ನ ಹೆಸರಲ್ಲಿ ಕಳುಹಿಸಿದ್ದಾಳೆ ಸೀತಾ! ಏನು ಉದ್ಧಟತನ!!

ಕ್ಷಣಮಾತ್ರದಲ್ಲಿ ದುಃಖ–ಸಂತಾಪಗಳು ಕ್ರೋಧ–ಆವೇಶಗಳು ಮಾರ್ಪಟ್ಟವು ನೆಟ್ಟನೆ ಧಾವಿಸಿದೆ ಅಡಿಗೆ ಕೋಣೆಗೆ

ನನ್ನ ಉದ್ವೇಗಪೂರ್ಣವಾದ ಮುಖವನ್ನು ಕೈಯಲ್ಲಿನ ಪತ್ರಿಕೆಯನ್ನು ಕಂಡು ಸೀತೆಗೆ ಪರಿಸ್ಥಿತಿಯು ತಿಳಿಯಿತು ‘ಏನ್ರೀ, ‘ಕರಾಳ ವಾಣಿ’ಯು ಬಂತೇ” ಎಂದು ಪ್ರಶ್ನಿಸಿದಳು

ಮಾತೆತ್ತದೆ, “ಕರಾಳ ವಾಣಿ”ಯನ್ನು ಅವಳು ಕುಳಿತಿದ್ದೆಡೆಗೆ ಬಿಸುಟಿದೆ.

ಕಾಲಿನಲ್ಲಿ ಕುಳಿತಿದ್ದ ಗೀತೆಯನ್ನು ಕೆಳಗೆ ಕುಳ್ಳಿರಿಸಿ, ಎದ್ದು ನನ್ನ ಸನಿಯಕ್ಕೆ ಬಂದು ನಿಂತಳು ಸೀತ.

“ಏನ್ರೀ, ಕೋಪ ಬಂತೇ?” ಎಂದು ಪ್ರಶ್ನಿಸಿದಳು. “ಕತೆಯು ತಮ್ಮದೇ. ಬಹುಮಾನ ಮಾತ್ರ ನನಗೆ ಸಿಕ್ಕಿತೆಂದು ನಿಮಗೆ ನನ್ನ ಮೇಲೆ ಕೋಪವೇ? ನಾನೇನೋ ಚೇಷ್ಟೆಗಾಗಿ ಕತೆಯ ಹೆಸರನ್ನು ತಿದ್ದಿ, ನನ್ನ ಹೆಸರಲ್ಲಿ ಕಳುಹಿಸಿದೆ ಪರಮಾತ್ಮನ ದಯೆಯಿಂದ ಪ್ರಥಮ ಬಹುಮಾನ ವೇನೋ ತಮ್ಮ ಕತೆಗೆ ಸಿಕ್ಕಿತು. ಆದರೆ ನನ್ನ ಹೆಸರಲ್ಲಿ ಬಹುಮಾನ ಬಂತೆಂದು ತಾವು ಇಷ್ಟು ಕೋಪವನ್ನು ತಾಳುವಿರೆಂದು ನಾನು ಎಣಿಸಿರಲಿಲ್ಲ. ಬೇಕಿದ್ದರೆ, ನಾನು ಇಂದೇ ‘ಕರಾಳವಾಣಿ’ ಸಂಪಾದಕರಿಗೆ ಪತ್ರ ಬರೆಯುತ್ತೇನೆ. ನಿಜ ಸ್ಥಿತಿಯ ಕುರಿತು!” ತಲೆ ಬಾಗಿಸಿ, ಹೇಳಿದಳು.

ಅಲ್ಲ, ಹೆಂಡತಿ ಹಾಗೆನ್ನುವಾಗ ಗಂಡನೇನೆನ್ನಬೇಕು?

ನನ್ನ ಕೋಪ ಆವೇಶಗಳೂ ಸೂರ್ಯರಶ್ಮಿಗೆ ಗುರಿಯಾದ ಮಂಜು ತುಂಡಿನಂತೆ ಕರಗಿದವು. ಕರ್ಕಶವಾದ ಧ್ವನಿಯು ಮಾರ್ದವವನ್ನು ಹೊಂದಿತು. ಪ್ರಸನ್ನವದನನಾಗಿ ಹೇಳಿದೆ. “ಸೀತಾ, ಕತೆ ನಾನು ಬರೆದೆ. ಬಹುಮಾನ ನಿನಗೆ ಸಿಕ್ಕಿತು. ಕತೆ ಬರೆಯುದಕ್ಕೆ ನನಗೆ ಬಹುಮಾನ?” ಎಂದು ಪ್ರಶ್ನಿಸಿದೆ.

ಬಾಗಿಸಿದ ತಲೆಯನ್ನು ಮೇಲೆತ್ತಿದಳು. ಸೀತೆಯ ಕಣ್ಣುಗಳಲ್ಲಿ ಆಹ್ವಾನವಿತ್ತು. ಅತ್ತಿತ್ತ ನೋಡಿದೆ ಗೀತಾ ಕೂತು, ನಮ್ಮನ್ನೇ ದಿಟ್ಟಿಸುತ್ತಿದ್ದಾಳೆ. "ಅದೋ, ಗೀತಾ, ಅಲ್ಲಿದೆ ಬಿಲ್ಲಿ" ಅಂದಂದು, ಗೀತೆಯು ಬಿಲ್ಲಿಯತ್ತ ಮುಖ ತಿರುಗಿಸಿದೊಡನೆ,

....ನಾನು ನನ್ನ ಬಹುಮಾನವನ್ನು ಪಡೆದೆನು !

---

# ಸ್ಯೆಕಲ್ ಸವಾರಿ

ಮೊನ್ನೆ ನಮ್ಮ ವೆಂಕಟ್ರಮಣ ದೇವಸ್ಥಾನದಲ್ಲಿ ಒಂದು ಹರಿಕಥಾ ಕಾಲ ಕ್ಷೇಪ ಜರುಗಿತು.

ಅಲ್ಲಿ ಹರಿದಾಸರು ಹೇಳಿದುದೆಲ್ಲವನ್ನೂ ಸಂಪೂರ್ಣವಾಗಿ ಒಪ್ಪುವಷ್ಟು ಬುದ್ಧಿವಂತನು ನಾನಲ್ಲವಾದರೂ, ಅವರಂದ ಒಂದು ಮಾತಿಗೆ ನನ್ನ ಸಂಪೂರ್ಣ " ಶಹಭಾಸ್‌ಗಿರಿ " ಇದೆ.

ಅವರಂದಿದ್ದರು. " ಇದು ಕಲಿಕಾಲ. ಇದರಲ್ಲೆಲ್ಲವೂ ತಿರುಗುಮುರುಗಾಗಿಯೇ ಸಾಗುವುದು !" ಎಂದು.

ಅಲ್ಲವಾದರೆ ಮತ್ತೇನು ? ಇತ್ತೀಚೆಗೆ ಇಡೀಯ ಜಗತ್ತೇ, ತಿರುಗು-ಮುರುಗಾಗಿರುವಂತೆ ತೋರುತ್ತಿದೆ.

ಬಿಳಿ ಟೊಪ್ಪಿ ಧರಿಸಿದವರು ಮಾಡುತ್ತಿರುವ ತಪ್ಪು ಕಾರ್ಯಗಳು ಕರಿ ಟೊಪ್ಪಿಯವರಿಂದಲೂ ಮಿಗಿಲು !

" ಜನತೆಯ ಹಿತಕ್ಕಾಗಿ ತನ್ನ ಜೀವನ ಮುಡಿಪು " ಅಂದ ಮಹಾಶಯರು ತಮ್ಮ ಹಿತಕ್ಕಾಗಿ ಜನತೆಯ ಜೀವನವನ್ನೇ ಬಲಿಯಾಗಿರಿಸುತ್ತಾರೆ !

ಒಂದೆಡೆ ಹರಿಜನರಿಗೆ ದೇವಸ್ಥಾನ ಪ್ರವೇಶವಾದರೆ ಇನ್ನೊಂದೆಡೆ ಬ್ರಾಹ್ಮಣರ ಮಕ್ಕಳು ಜುಟ್ಟು ಕಳಚಿ, ಕ್ರಾಫ್ ಬಾಚಿ, ಹೋಟೆಲಿಗೆ ಹೋಗಿ, ತೋಮ - ಶುಕ್ರರೊಡನೆ ಊಟಮಾಡುತ್ತಾರೆ !

" ಚಾತುರ್ವರ್ಣ್ಯಂ ಮಯಾಸೃಷ್ಟಂ " ಎಂದ ಆ ಪರಮಾತ್ಮ ಬಹುಶಃ ಅಜ್ಞಾತವಾಸದಲ್ಲಿದ್ದಾನೆ.

ಮಾನವನಿಗೆ ಪ್ರಗತಿಬೇಕು – ಎನ್ನುವವರ ಮನೋಭಾವ ಪ್ರಗತಿಗಾಮಿಯಾಗುವುದರ ಬದಲು ಪ್ರತಿಗಾಮಿಯಾಗಿದೆ.

ಒಂದೆಡೆ " ಉಳುವವನಿಗೇ ಹೊಲ "ವಂತೆ !

ಏನು ಉಳುವವನಿಗೆ ಹೊಲ ?

ಈ ವಾದಸರಣಿಯಲ್ಲಿ – ನಮ್ಮ ತೋಟವನ್ನು ನೋಡಿಕೊಳ್ಳಲು ಮುತ್ತಯ್ಯ ಶೆಟ್ಟಿಯನ್ನು ನೇಮಿಸಲಾಗಿದೆ. ತೋಟದಲ್ಲಿರುವ ಕಳೆ ಕೀಳಿ, ಗಿಡ – ಮರಗಳಿಗೆ ನೀರು ಹೊಯ್ದು, ಆ ತೋಟದ ಯೋಗಕ್ಷೇಮವನ್ನು ಅವನಿಗೆ ಹೊರಿಸಲಾಗಿದ ಆ ತೋಟ ಅವನಿಗೆ ಆಯಿತು

ನಮ್ಮ ಮನೆಯ ಕೆಲಸಕ್ಕೆ ಮೈರೆ ಬರುತ್ತಾಳೆ. ಮನೆಯೊಳಗಣ ಕಸ ಗುಡಿಸಿ, ಸಾರಿಸಿ, ಸ್ವಚ್ಛವಾಗಿಟ್ಟು, ಬಟ್ಟೆ ಒಗೆಯುವುದರಿಂದ ಹಿಡಿದು, ಪಾತ್ರೆ ತಿಕ್ಕುವವರೆಗಿನ ಕಾರ್ಯಭಾರ ಅವಳಿಗಿದೆ. ನಮ್ಮ ಮನೆ – ನಮ್ಮ ಬಟ್ಟೆಬರೆಗಳು – ಪಾತ್ರೆಗಳು – ಮೈರೆಗಾದವು

ನನ್ನ ಮದುವೆಯಾಗಿ ಸಾಮಾನ್ಯ ೧೫ ವರ್ಷಗಳಾಗಿದ್ದಾವೆ. ಇಂದಿನ ತನಕ ಸೀತೆಯೇ ಅಡಿಗೆಮಾಡಿ, ನನಗೆ ಬಡಿಸಿದ್ದಾಳೆ ಇನ್ನುಮೇಲೆ ಮಾಡಿದ ಅಡಿಗೆ ಸೀತೆಗೇನೇ ಆಯಿತು.

ಇನ್ನು ನನಗೆ ?

ಬಹುಶಃ ಭಜಗೋವಿಂದಂ

ಅಲ್ಲವಾದರೆ

ಔಷಧಾಲಯದಲ್ಲಿ ಕಂಪೌಂಡರನಾಗಿದ್ದೇನೆ ಆ ಔಷಧಾಲಯವೇ ನನಗೇನೋ ?

ಸಾಯಂಕಾಲದ ಹೊತ್ತು. ಊರಲ್ಲಿ ಸಾಂಕ್ರಾಮಿಕ ರೋಗಗಳೇನೂ ಹರಡಿಲ್ಲ ಮಂಗಳೂರಿನ ಜನತೆಯೆಲ್ಲಾ ತಕ್ಕಮಟ್ಟಿಗೆ ಆರೋಗ್ಯವಾಗಿಯೇ ಇತ್ತು.

ಆದ್ದರಿಂದ ಔಷಧಾಲಯದಲ್ಲಿ ನನಗೂ ಸ್ವಲ್ಪ ಬಿಡುವು !

ಮನಸ್ಸೆಂದರೆ ಲಗಾಮಿಲ್ಲದ ಕುದುರೆಯಲ್ಲವೇ? ಏನೇನೋ ಯೋಚಿಸುತ್ತಾ ಇದ್ದೆ.

ಅಷ್ಟರಲ್ಲಿ .

"ಟ್ರಿಂoooo" ಎಂಬ ಶಬ್ದದೊಂದಿಗೆ ಒಂದು ಸೈಕಲು ನಮ್ಮ ಔಷಧಾಲಯದೆದುರು ಬಂದು ನಿಂತಿತು

ಕತ್ತೆತ್ತಿ ನೋಡಿದರೆ

ಒಂದು ಸ್ತ್ರೀ! ಹೆಂಗಸು!!

ಸೈಕಲು ಸವಾರಿ ಮಾಡಿಕೊಂಡೇ ಔಷಧಾಲಯಕ್ಕೆ ಬಂದಿದೆ! ಏನು ಧಿಮಾಕು!!

ಕಲಿಕಾಲವಲ್ಲದೆ ಮತ್ತೇನು?

"ಗೃಹಿಣೀ ಗೃಹಮುಚ್ಯತೇ" ಎಂಬ ಕಾಲ ಹೋಗಿ, "ಗೃಹಿಣೀ ಗೃಹ ಮುಚ್ಛ್ಯತೇ" ಆಗಿದೆ!

ಎಲ್ಲಿ ನೋಡಿದಲ್ಲಿ ಈ ಸ್ತ್ರೀಯರ ಕಾರಭಾರು!

ಶಾಲಾ ಸಮಾರಂಭಗಳಲ್ಲಿ ಅಧ್ಯಕ್ಷತೆ ವಹಿಸಲು, ಒಬ್ಬ "ಮಹಾಜನ" ವನ್ನು ಆಹ್ವಾನಿಸಿದರೆ, ಮಕ್ಕಳಿಗೆ ಇನಾಮು ಹಂಚಲು ಅವರ ಪತ್ನಿ–"ಮಹಾ ಜನಿ!" ಯಾಕೆ? ಇನಾಮು ಹಂಚುವಷ್ಟಕ್ಕೆ ಆ "ಮಹಾಜನ"ದ ಕೈ ಮುರಿದಿದೆಯೇ?

ಊರಲ್ಲಿ ಗಂಡಸರ ಕ್ಲಬ್ ಇದ್ದರೆ, ಅದರೆದುರು ಇನ್ನೊಂದು ಲೇಡೀಸ್ ಕ್ಲಬ್!

ಯಾವ ಆಫೀಸಿಗೆ ಹೋದರೂ—

ಕ್ಲಾರ್ಕ್ – ಮಿಸ್ !

ಟೈಪಿಸ್ಟ್ – ಮಿಸ್ !

ಅಕೌಂಟೆಂಟ್ – ಮಿಸ್.. !

ಕೇಶಿಯರ್ – ಮಿಸ್ .!

ಎಲ್ಲರೂ ಮಿಸ್‌ಗಳೇ! ಆಫೀಸು ಕೆಲಸಕ್ಕೆ ಸೇರಿದ ಎಲ್ಲಾ ಸ್ತ್ರೀಯರೂ "ಮಿಸ್" ಆದವರೇ ಅಲ್ಲದೆ, "ಮಿಸೆಸ್" ಆದವರೇ ಇಲ್ಲ!

"ಸರ್ವಂ ಸ್ತ್ರೀಮಯಂ" ಆದ ಈ ಜಗತ್ತಿನಲ್ಲಿ ಸೈಕಲ್ ಸವಾರಿ ಮಾಡುವ ಸ್ತ್ರೀಯರೂ ಇದ್ದಾರೆ

ಅಂತಹದೊಂದು ಹಿಡಿಂಬೆ ನಮ್ಮ ಔಷಧಾಲಯದೊಳಹೊಕ್ಕಿತು.

ನೆಟ್ಟಗೆ ನನ್ನೆಡೆಗೆ ಬಂತು.

"ಗುಡ್ ಇವ್ನಿಂಗ್ ಕಂಪೌಂಡರ್!" ಎಂದಿತು.

ಎಡಬದಿಯಲ್ಲಿ ಡ್ರೈವರನನ್ನು ಕೂಡ್ರಿಸಿ, ಅವನ ಬಲಬದಿಯಲ್ಲಿ ಕುಳಿತು, ಕಾರಿನ "ಸ್ಟೇಯರಿಂಗ್ ವ್ಹೀಲ್" ತಿರುಗಿಸಿದ ಅನೇಕ ಮಹಿಳೆಯರನ್ನು ಕಂಡಿದ್ದೇನೆ. ಅವರ ಸ್ಥೈರ್ಯ–ಸಾಮರ್ಥ್ಯಕ್ಕೆ ಮೆಚ್ಚಿದ್ದೇನೆ. ಆದರೆ .

ಕುದುರೆಯ ಮೇಲೆಂಬಂತೆ ಕೂತು, ಸೈಕಲ್ ಸವಾರಿ ಮಾಡಲೆಳಸಿದ ಸ್ತ್ರೀಯನ್ನು ಕಂಡಕೂಡಲೇ ನನ್ನ ಮೈ ಉರಿಯೇಳುತ್ತದೆ ಕಾರಣವೇನೋ ತಿಳಿಯದು ಹಾಗೆಂದು ಔಷಧಾಲಯಕ್ಕೆ ಬಂದವರೊಂದಿಗೆ ಉರಿವ ಮಾತುಗಳನ್ನಾಡುವುದೇ ?

"ಗುಡ್ ಇವ್ನಿಂಗ್!" ಅಂದೆ

ಅಲ್ಲಿಗೆ ನಮ್ಮ ಸಾಲ ಸಂದಿತು. ಅವಳ "ಗುಡ್ ಈವ್ನಿಂಗ್"ಗೆ ನನ್ನ "ಗುಡ್ ಈವ್ನಿಂಗ್!" ವಾಪಸು!

"ಏನು ಬಂದಿರಿ!" ಅಂದೆ

ವಾಸ್ತವವಾಗಿ ನಾನೂ ಸೈಕಲ್ ಸವಾರನೇ! ನನಗೂ ಒಂದು ಸೈಕಲು ಇದೆ ಕಾರು ಕೊಳ್ಳೋಣವೆಂದರೆ ಕಾಸಿಲ್ಲ! ನಡಕೊಂಡೇ ಹೋಗಿ ಬರೋಣ ಅಂದರೆ ಮನೆಗೂ ಆಫೀಸಿಗೂ ಕನ್ಯಾಕುಮಾರಿಯ ಹಾಗೂ ಗೌರಿಶಂಕರದಷ್ಟೇ ಅಂತರ! ಸಿಟಿ ಬಸ್ಸು ಪ್ರಯಾಣಿಸುವ ಅಂದರೆ ನನ್ನ ಆಫೀಸಿನ ವೇಳೆಗೂ "ಸಿಟಿ ಬಸ್ ಟ್ಯಾಮಿಂಗ್"ಗೂ ತಾಳಮೇಳವಿಲ್ಲ! ಹಾಗಾಗಿ .

ಕೈಹಿಡಿದವಳಮಟ್ಟಿಗಾದರೂ "ವಿಚ್ಛೇದನ ಕಾನೂನು" ಇದೆ ಆದರೆ ಸೈಕಲಿನ ಕೈ ಬಿಡುವಂತಿಲ್ಲ ಆದರೂ

ಈ ಹೆಂಗಸರು ಸೈಕಲನ್ನೆ ಹತ್ತಿದುದನ್ನು ಕಂಡರೆ, ನನ್ನ ಕಣ್ಣಿಗೆ ಕೆಂಪೆರಚಿದಂತಾಗುತ್ತದೆ.

ಸೈಕಲ್‌ವಾಲಿಯೆಂದಳು. "ಏನಿಲ್ಲ ಮಿಸ್ಟರ್! ಸೈಕಲಿನ ಹಿಂದಿನ ಚಕ್ರ

ದಲ್ಲಿ ಗಾಳಿಯಿಲ್ಲ. ಟಯರಿಗೆ ತೂತಾಗಿದೆಯಂತೆ. ಅದನ್ನು ರಿಪೇರಿ ಮಾಡಲು ಎರಡಾಣೆ ಬೇಕಿತ್ತು. ನಾನು ಹಣ ತಂದಿಲ್ಲ. ನಾಳೆ ವಾಪಸು ಕೊಡುತ್ತೇನೆ."

ಹಣ ತಂದಿಲ್ಲ! ಹೆಗಲ ಮೇಲಿಂದ ತೂಗುತ್ತಿದೆ ಸನ್ಯಾಸಿಗಳ ಜೋಳಿಗೆ ಯಷ್ಟು ದೊಡ್ಡ ಪರ್ಸ್!

" ಪರ್ಸ್ ಇದೆಯಲ್ಲ ?" ಅಂದೆ.

ನಕ್ಕು ಪರ್ಸಿನ ಬಾಯಿ ತೆರೆದು, ತಲೆಕೆಳಗಾಗಿಸಲು ಪರ್ಸಿನಿಂದ ಕೆಳಗೆ ಬಿತ್ತು. .

೧. ಲಿಪ್‌ಸ್ಟಿಕ್ ತುಂಡು

೨. ಪೌಡರ್ ಪಫ್.

೩. ಪೌಡರ್ ಕಟ್ಟಿದ ಕಾಗದದ ಪೊಟ್ಟಣ.

೪. ಚಿಕ್ಕ ಒಂದು ಬಾಚಣಿಗೆ.

೫. ಅದಕ್ಕಿಂತಲೂ ಒಂದು ಚಿಕ್ಕ ಕನ್ನಡಿ.

೬ ಮೂಗನ್ನು ಒರೆಸಲು ಕೂಡಾ ಸಾಕಾಗದಷ್ಟು ಚಿಕ್ಕ ಕರ್ಚಿಫ್‌ಗಳು ಎರಡು.

" ಪರ್ಸ್ ಇದೆ ಆದರೆ ಹಣ ಇಲ್ಲ" ಅಂದಳು ದುರ್ದುಂಡಿ ನಗುತ್ತ.

ಪರ್ಸ್ ಇದೆ ? ಹಣ ಇಲ್ಲ ? ಬಾಯಿ ತೆರೆದರೆ ಮೊಸಳೆಯಂತೆ ತೋರುವ ಪರ್ಸ್ ಇದೆ. ಆದರೆ ಅದರೊಳಗೆ ಚಿಕ್ಕಾಸೂ ಇಲ್ಲ! ಏನು ಅವತಾರ ಈ ಸ್ತ್ರೀಯದು ?

ನಾನೆಂದೆ. " ನಿಮ್ಮ ಕೂಡೆ ಪರ್ಸ್ ಇದೆ, ಹಣವಿಲ್ಲ. ನನ್ನ ಕೂಡೆ ಪರ್ಸ್ ಇಲ್ಲ, ಹಣವೂ ಇಲ್ಲ!"

ಹಾಳಾಗಿ ಹೋಗಲಿ – ಈ ಸೈಕಲ್‌ವಾಲಿ! ದೂಡಿಕೊಂಡೇ ಸೈಕಲನ್ನು ಮನೆಯುತನಕ ಒಯ್ಯಲಿ! ಸೈಕಲನ್ನು ನೂಕಿಕೊಂಡು ಹೋಗಿ, ಮನೆಮುಟ್ಟು ವಾಗಲಾದರೂ ಬುದ್ಧಿ ಬಂದೀತು ಆಕೆಗೆ – ಇನ್ನು ಮುಂದೆ ಸೈಕಲ್ ಸವಾರಿ ಸ್ತ್ರೀಯರಿಗೆ ಕೂಡದೆಂದು!

" ಮಿಸ್ಟರ್, ಟೂ ಅನ್ನಾಸ್ !" ಅಂದಿತು ಪುನಃ ಆ ಪೀಡೆ.

ನಾನೆಂದೆ. " ನೋಡ್ರಿ, ಮಿಸ್...."

" ನನ್ನ ಹೆಸರು ಚಿತ್ರಾಕ್ಷಿ!" ನಡುವಿನಲ್ಲೇ ಒದರಿತು ಆ ಸ್ತ್ರೀ.

"ಚಿತ್ರಾಕ್ಷಿ ಆಗಲಿ, ವಿಚಿತ್ರಾಕ್ಷಿಯೇ ಆಗಲಿ. ನಿಮ್ಮ ಹೆಸರಿನ ಅಗತ್ಯ ನನಗಿಲ್ಲ. ನನ್ನ ಕೂಡೆ ಎರಡಾಣೆ ಇಲ್ಲ ನೊ ಟು ಅನ್ನಾಸ್, ದೊ ಆನಾ ನಹೀ ಹೈ!" ಅಂದೆ.

ಮುಖ ಸೆಟಿಸಿ, ಹೊರಟು ಹೋದಳು.

ಅಲ್ಲ, ಹೆಂಗಸರು ಸೈ ಕ ಲ್ ಸವಾರಿಗೆ ಹೊರಟರೆಂದರೆ? ಎಂತಹ ಪರಿಸ್ಥಿತಿ ಇದು? ನನಗೇನೋ ಮನಸ್ಸು ಉರಿದೇಳುತ್ತದೆ – ಈ ಸೈಕಲ್ ಸವಾರಿಯ ಸ್ತ್ರೀಯರನ್ನು ಕಂಡೊಡನೆ

ಅಂತಂದು ನಾನು ಏನು ತಾನೇ ಮಾಡಬಲ್ಲೆ?

ಎಲ್ಲಾದರೂ ಮಾರ್ಗದಲ್ಲಿ "ಸೈಕಲಾರೋಹಿ"ಯಾದ ಸ್ತ್ರೀ ಸಿಕ್ಕಿದರೆ, ನನ್ನ ಸೈಕಲಿಂದ ಅವಳ ಸೈಕಲಿಗೆ ಡಿಕ್ಕಿ ಹೊಡೆಸಿ, ಸೈಕಲ್‌ವಾಲಿಯನ್ನು ಚರಂಡಿಗೆ ನೂಕಬಲ್ಲೆ!

ಸಾಯಲಿ, ಗುಬ್ಬಿಯಮೇಲೆ ಏಕೆ ಬ್ರಹ್ಮಾಸ್ತ್ರ!

× × × ×

ಮನೆಗೆ ಬಂದಕೂಡಲೆ ಸೀತೆಯೆಂದಳು "ನೋಡ್ರಿ, ಪಾರ್ವತಿ ಒಂದು ಹೊಸ ಲೇಡೀಸ್ ಸೈಕಲು ತಕ್ಕೊಂಡಿದ್ದಾಳೆ!"

"ಈಶ್ವರ ಏನಂದ?" ಎಂದೆ.

ದುರುದುರನೆ ನನ್ನನ್ನು ದಿಟ್ಟಿಸುತ್ತಾ "ಯಾವ ಈ ಶ್ವ ರ?" ಅಂತ ಕೇಳಿದಳು ಸೀತಾ.

"ಪಾರ್ವತಿಯ ಗಂಡ!" ಅಂದೆ.

"ಪಾರ್ವತಿಯ ಗಂಡನ ಹೆಸರು ಈಶ್ವರ ಅಲ್ಲ, ಕೋದಂಡರಾಯ!" ಅಂದಳು ಸೀತೆ.

"ಇಗೋ ಸೀತಾ, ಸುಮ್ಮಸುಮ್ಮನೆ ಜಗಳ ಹಚ್ಚಬೇಡ ನಿನ್ನ ಹಟಕ್ಕಾಗಿ ಕಳೆದ ತಿಂಗಳಿಡೀ ಆ ಕೋತಿಮುಖದ ಹರಿದಾಸನ ಹರಿಕಥೆಗೆ ಪ್ರತಿದಿನವೂ ಹೋಗಿ, ಆ ಶಿವಲೀಲಾಮೃತವನ್ನು ಕೇಳಿದ್ದೇನೆ ಪಾರ್ವತಿಯ ಗಂಡ ಈಶ್ವರ– ಈಶ್ವರನ ಹೆಂಡತಿ ಪಾರ್ವತಿ. ಅಲ್ಲವೆಂದವರು ಆ ಹರಿದಾಸನೊಡನೆ ಮಲ್ಲ ಯುದ್ಧಕ್ಕೆ ಸನ್ನದ್ಧರಾಗಲಿ – ಹರಹರ ಮಹಾದೇವ!" ಅಂದೆ.

ಸೀತಾ ನಕ್ಕಳು. "ಅಯ್ಯೋ ನಿಮ್ಮ ತಲೇನೇ! ನಾನು ಆ ಪಾರ್ವತಿಯ

ಗಂಡ ಈಶ್ವರ – ಈಶ್ವರನ ಹೆಂಡತಿ ಪಾರ್ವತಿಯ – ವಿಷಯ ಮಾತಾಡಲಿಲ್ಲ. ನಾನು ಹೇಳಿದ್ದು – ನಮ್ಮ ನೆರೆಮನೆ – T S ನಂಬ್ರ ೩೩೬ – ಅದರಲ್ಲಿ ಕೋದಂಡರಾಯರಿದ್ದಾರಲ್ಲ, ಅವರ ಹೆಂಡತಿ–ಪಾರ್ವತಿ–ನಮ್ಮ ಲೇಡೀಸ್ ಕ್ಲಬ್ಬಿನ ಗೌರವ ಕಾರ್ಯದರ್ಶಿ–ಅವಳ ವಿಷಯ ಹೇಳಿದ್ದು" ಅಂದಳು.

ಏಕೋ ಏನೋ ? ಈಚೀಚೆಗೆ ಈ ಸೀತೆ ಮಾತನಾಡಿದ್ದೇ ಅರ್ಥವಾಗುವುದಿಲ್ಲ ಲೇಡೀಸ್ ಕ್ಲಬ್ಬಿನ ಜತೆ ಕಾರ್ಯದರ್ಶಿ, ಶಿಶುವಿಹಾರದ ಅಧ್ಯಕ್ಷೆ, ಟೆನ್ನಿಸ್ ಟೂರ್ನಮೆಂಟಿನ ಚೇಂಪಿಯನ್ – ಇನ್ನೂ ಏನೇನೋ ಅಲ್ಲದಸಲ್ಲದ ಬಿರುದುಗಳಿವೆ ಆಕೆಗೆ ಕಾಸಿನ ಪ್ರಯೋಜನವಿಲ್ಲ ಇಂತಹ ಮಹಾತ್ಮಳ ಮಾತುಗಳು ನನ್ನಂತಹ ಬಡಪಾಯಿ ಕಂಪೌಂಡರನ ತಲೆಯೊಳಗೆ ಹೊಕ್ಕುವುವೇ ? ಹೊಕ್ಕಿದರೂ ಅರ್ಥವಾಗಬೇಕಲ್ಲ ! ತಲೆ ತುರಿಸಹತ್ತಿವೆ.

" ಏನ್ರೀ ?" ಅಂದಳು ಸೀತಾ

" ಏನಿಲ್ಲ, ನೀನು ಮಾತಾಡುತ್ತಿದ್ದುದು ಯಾರ ವಿಷಯವೆಂದು ತಿಳಿಯಿತು ಆದರೆ ಏನು ವಿಷಯವೆಂದು ತಿಳಿಯಲಿಲ್ಲ" ಅಂದೆ

" ಬೇರೇನಿಲ್ಲ, ಆ ಕೋದಂಡರಾಯರ ಹೆಂಡತಿ ಪಾರ್ವತಿಬಾಯಿ ಒಂದು ಹೊಸ ಲೇಡೀಸ್ ಸೈಕಲು ತಕ್ಕೊಂಡಿದ್ದಾಳೆ !" ಅಂದಳು

" ಯಾಕೆ ? ಸೈಕಲಿನಿಂದ ಪಲ್ಯ ಆಗುತ್ತದೆಯೋ ಅಥವಾ ಸೈಕಲಿನ ಚಟ್ನಿ ಆಗುತ್ತದೆಯೋ ?"

" ಅಲ್ರೀ, ಪ್ರತಿದಿನ ಲೇಡೀಸ್ ಕ್ಲಬ್ಬಿಗೆ ಹೋಗಿಬರಬೇಕು ಅವಳಿಗೆ. ನಡಕೊಂಡೇ ಹೋಗಿ ಬರುವುದೆಂದರೆ ಬಹಳ ಸಮಯ ಹಾಳಾಗುತ್ತದೆ. ಆದ್ದರಿಂದ ಸೈಕಲನ್ನು ಕೊಂಡುಕೊಂಡಿದ್ದಾಳೆ."

ನನಗೆ ಆಗಲೇ ಸಂಶಯ ಬಂದಿತ್ತು. ಕಾದಂಬರಿಕಾರರೆನ್ನುವಂತೆ, ಮನಸ್ಸಿನ ಗದ್ದೆಯೊಳಗೆ ಸಂದೇಹದ ಬೀಜ ಬಿತ್ತಿದಂತಾಗಿತ್ತು. ಆದರೆ ಸೀತೆಯಲ್ಲವೇ ? ನನ್ನ ಸೀತೆ ! . ಬೀಜವನ್ನು ಮೊಳಕೆಯಲ್ಲೇ ಕಿತ್ತೆಸೆದೆ

" ಸಂಸರ್ಗಜಾ ದೋಷಗುಣಾ ಭವಂತಿ " ಅಂತ ನಮ್ಮ ಶಾಲೆಯಲ್ಲಿ ಸಂಸ್ಕೃತ ಪಂಡಿತರು ಆಗಾಗ್ಗೆ ಹೇಳುತ್ತಾ ಇದ್ದುದರ ನೆನಪಿದೆ.

ಹಾಗೇನೇ ಈ ಸೀತೆಗೆ ಕ್ಲಬ್ಬಿನ ಕೆಲಗೆಳತಿಯರು – ಹಿಡಿಂಬೆ, ತಾಟಕೆ, ಶೂರ್ಪನಖಿಯಂತಹರು ! ಅವರಿಗೆ ಗಂಡ ನನ್ನಂತಹನಾಗುತ್ತಿದ್ದರೆ ಅವರ

ಜುಟ್ಟು ಹಿಡಿದು ಮನೆಯೊಳಗಿನ ಮುಹೂರ್ತ ಕಂಬಕ್ಕೆ ಕಟ್ಟಿ ಹಾಕುತ್ತಿದ್ದ. ಈ ಹಿಡಿಂಬೆ, ತಾಟಕೆ, ಶೂರ್ಪನಖಿಯರ ಗೆಳೆತನ ಬೆಳೆಸಿ, ನನ್ನ ಸೀತೆಯೂ ಅವರ ಗುಣಗಳನ್ನೇ ತಳೆಯಬೇಕೇ ?

ಪ್ರಪ್ರಥಮವಾಗಿ – ಮದುವೆಯಾಗಿ ಮನೆಗೆ ಬಂದಾಗ್ಯೆ —

ನನಗೆ ಒಂದು ರಾತ್ರೆ ಎಲ್ಲಾದರೂ ತಲೆಶೂಲೆ ಎದ್ದಿತೆಂದರೆ ಸೀತೆಗೆ ನಾಲ್ಕು ರಾತ್ರಿ ನಿದ್ರೆಯಿಲ್ಲ !

ಬಟ್ಟೆ ಒಗೆಯಲು ವ್ಯೆರೆ ಇದ್ದರೂ, ನನ್ನ ಬಟ್ಟೆಗಳನ್ನು ಒಗೆಯುವುದು ಸೀತೆಯೆ !

ಸೈಕಲ್ ತುಳಿದೂ ತುಳಿದು ನನ್ನ ಕಾಲುಗಳು ಬಚ್ಚಿದುವೆಂದರೆ, ಸೀತೆಯೆ ಆ ಕಾಲುಗಳಿಗೆ ಎಣ್ಣೆ ಹಚ್ಚಿ ತಿಕ್ಕುವವಳು !

ಅಡಿಗೆಯ ಭಟ್ಟ ಅಡಿಗೆ ಮಾಡಿದರೂ, ಎಲೆ ಇಟ್ಟು ನನಗೆ ಬಡಿಸುತ್ತಿದ್ದುದು ಸೀತೆಯೆ !

ಅಂತಹ ಆ ಸೀತಾ – ಈಗ . ?

ಕೇಳಬೇಡಿ

ತಲೆಶೂಲೆ ಆದರೆ " ಆಸ್ಪ್ರೊ ತೆಗೆದುಕೊಳ್ಳಿ." ಅಂತಾಳೆ. ಕಾಲುನೋವು ಅಂದರೆ " ಸೈಕಲಲ್ಲಿ ಕೂರಬೇಡಿ " ಅಂತಾಳೆ. ನಾನು ಮಧ್ಯಾಹ್ನದಲ್ಲಿ ಮನೆ ಸೇರುವುದರ ಮೊದಲು ಊಟ ತೀರಿಸಿ ಭಗಿನಿ ಸಮಾಜಕ್ಕೆ ಹೊರಡುತ್ತಾಳೆ. ನನಗೆ ಊಟ ಅಂದರೆ " ಅಡಿಗೆ ಭಟ್ಟ ಇದ್ದಾನೆ " ಅಂತಾಳೆ

ಸಾಯಲಿ, ಮಾತಾಡಿ ಏನು ಫಲ ? ಆಕಾಶಕ್ಕೆ ಉಗುಳಿದರೆ ಮುಖದ ಮೇಲೆಯೇ ಬೀಳುವುದಂತೆ !

× × × ×

ನನಗೆ ಆ ದಿನ ಆಫೀಸಿನಲ್ಲಿ ಕೆಲಸ ಬಹಳ ಜಾಸ್ತಿ ಇತ್ತು. ಹೆಸರಲ್ಲಿ ಮಾತ್ರ ನಾನು " ಕಂಪೌಂಡರ್ " ಆದರೂ ನಮ್ಮ ಆಫೀಸಿನಲ್ಲಿ ಕಂಪೌಂಡರ್, ಅಕೌಂಟೆಂಟ್, ಸ್ಟಾಕ್‌ಕೀಪರ್, ಕರೆಸ್ಪೋಂಡೆಂಟ್, ಪ್ಯೂನ್ ಹೆಚ್ಚೇಕೆ ? ನರ್ಸ್ ಕೂಡಾ ನಾನೇ ನಾನು.

ಯಾವಾಗಲೂ ಸಾಯಂಕಾಲ ಆರುವರೆಗೆ ಔಷಧಾಲಯ ಮುಚ್ಚಿ

ಹೊರಡುವ ನನಗೆ, ಆ ದಿನ ಆಫೀಸಿನಿಂದ ಹೊರಬೀಳುವಾಗ ಗಂಟೆ ಎಂಟು ಕಳೆದಿತ್ತು.

ಸಾಲದಕ್ಕೆ ಅಮಾವಾಸ್ಯೆಯ ಕರಾಳ ಕಗ್ಗತ್ತಲೆ! ಆಫೀಸಿಗೆ ಬೀಗ ತಗುಲಿಸಿ, ಅಂಗಳದಲ್ಲೇ ಸೈಕಲನ್ನೇರಿ ಗೇಟಿನಿಂದ ಹೊರಬರುವಾಗ..

" ಟ್ರಿಂಂಂಂ " ಎಂಬ ಶಬ್ದದೊಡನೆ ಒಂದು ಸೈಕಲ್ ಅಡ್ಡ ಬಂತು.

ಅದೂ wrong sideನಲ್ಲಿ!

ಬ್ರೇಕ್ ಹಾಕಿ, ಸೈಕಲನ್ನು ಅಡ್ಡ ಹಾಕಿದೆ.

" Very sorry " ಅಂದಿತು ಸೈಕಲ್ ಮೇಲಿನ ವ್ಯಕ್ತಿ! ನೋಡಿದರೆ....

ಒಂದು ಹೆಂಗಸು!

Wrong side ನಲ್ಲಿ Light ಇಲ್ಲದೆ ಸವಾರಿ ಮಾಡುತ್ತಿದ್ದಾಳೆ! ಢಿಕ್ಕಿ ಹೊಡೆಯುವುದು ಮಾತ್ರ ಬಾಕಿಇದೆ! ಅದರ ಮೇಲೂ " Very-sorry " ಅಂತೆ!

ಮನವಾರೆ, ಮನಸ್ಸಿನಲ್ಲೇ ಆಕೆಯನ್ನೂ – ಯಾರೆಂದು ತಿಳಿಯದು – ಶಪಿಸಿದೆ. ಆಕೆಯ ಅಜ್ಜನಿಂದ ಹಿಡಿದು, ಮೊಮ್ಮಕ್ಕಳ ತನಕವೂ ಸಹಸ್ರನಾಮ ಮಾಡಿ, ಮುಗಿಸಿ, ಪುನಃ ನನ್ನ ಸೈಕಲನ್ನೇರಿ ಹೊರಟೆ

ಶಕುನದಲ್ಲಿ ನನಗೆ ವಿಶ್ವಾಸ ಇಲ್ಲ ಅಂತ ಇಟ್ಟುಕೊಳ್ಳಿ. ಆದರೆ ಇದೊಂದು ಅಪಶಕುನವಲ್ಲವೇ?

ಕದಿರೆಯಿಂದ ಜೇಡಿಗುಡ್ಡೆಯ ಮಾರ್ಗವಾಗಿ ಮನೆಯತ್ತ ಸಾಗಿದೆ.

ಗಾಡಿಯ ಚೌಕದ ಒಳ ಬರುವಾಗ್ಲೇ ಇನ್ನೊಂದು ಸೈಕಲು ನನಗೆ ಅಡ್ಡಲಾಯಿತು.

ಪುಣ್ಯಕ್ಕೆ ಪುನಃ ಢಿಕ್ಕಿ ಹೊಡೆಯುವುದು ಮಾತ್ರ ಬಾಕಿ ಉಳಿಯಿತು

ನೋಡಿದರೆ. .

ಆ ಸೈಕಲ ಮೇಲೂ ಒಂದು ಹೆಂಗಸು!

ಗ್ರಹಚಾರವೆ! ಎಲ್ಲಿ ಹೋದರೂ ಈ ಸೈಕಲ್‌ವಾಲಿಗಳಿಂದ ನನಗೆ ಉಳಿಗಾಲವಿಲ್ಲವೇ?

ಆಫೀಸಿನಿಂದ ಹೊರಟವ ಅರ್ಧ ಹಾದಿಗೆ ಬರಬೇಕಾದರೆ ಎರಡು ಸೈಕಲ್ ವಾಲಿಗಳು ಎದುರಾಗಿದ್ದಾರ!

ಇನ್ನು ಮನೆ ಸೇರಬೇಕಾದರೆ. .

ಎರಡು ಸಲ ನಡೆದುದು ಮೂರನೇ ಸಲವೂ ನಡೆಯಬೇಕಾದುದು ವಿಧಿ ನಿಯಮ !

ಇನ್ನು ಮೂರನೇ ಸಲ ಸೈಕಲ್ ಸವಾರಿ ಮಾಡುವ ಹೆಂಗಸು ಸಿಕ್ಕಿದರೆ. ..?

ಖಂಡಿತವಾಗಿಯೂ ಆಕೆಯ ಸೈಕಲಿಗೆ ಢಿಕ್ಕಿ ಹೊಡೆಯಲಾರೆನೇ ?

ಢಿಕ್ಕಿ ಹೊಡೆದು, ಆಕೆಯನ್ನೂ ಸೈಕಲನ್ನೂ ಚರಂಡಿ ಪ್ರವೇಶಗೊಳಿಸಲಾರೆನೇ ?

ಇಷ್ಟು ಯೋಚಿಸುವಾಗ್ಯೆ ಗಾಡಿಯ ಚೌಕನ್ನು ದಾಟಿ, ಡೋಂಗರ ಕೇರಿ ರಸ್ತೆಗೆ ಇಳಿದಿದ್ದೆ

ಅಮಾವಾಸ್ಯೆಯ ಕತ್ತಲೆಂದು ಮೊದಲೇ ತಿಳಿಸಿದ್ದೇನೆ ನನ್ನ ಸೈಕಲಿನ ದೀಪ ಅಂದರೆ ಪೋಲೀಸನ ಕಣ್ಣಿಗೆ ಮಣ್ಣು ಹಾಕಲಿಕ್ಕೆ ಮಾತ್ರ ಸಾಕಿತ್ತಲ್ಲದೆ, ಮಾರ್ಗದರ್ಶಕವಾಗುವಷ್ಟು ಬೆಳಕು ಅದರಿಂದ ಉದ್ಭವವಾಗುತಿದ್ದಿಲ್ಲ.

ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ನಡುವಿನಲ್ಲಿ ಡಾಮರು ಎದ್ದುಹೋಗಿ, ದೊಡ್ಡ ದೊಡ್ಡ ಹೊಂಡೆಗಳು ಹುಟ್ಟಿದ್ದುವು. ಅವುಗಳನ್ನು ಮುಚ್ಚಲು ಇನ್ನೂ ನಮ್ಮ ನಗರ ಸಭೆಗೆ ಪುರುಸೊತ್ತು ಸಿಕ್ಕದೆ, ಹೊಂಡೆಗಳಿದ್ದವುಗಳು ಚಿಕ್ಕ ಬಾವಿಗಳಂತಾಗಿ, ಈಗ ಕೆರೆಯೆಂದು ಕರೆಯಲ್ಪಡುವ ಸ್ಥಿತಿಗೆ ಬಂದಿದ್ದುವು. ಸಾಲದ್ದಕ್ಕೆ ಎಡಬದಿಯಲ್ಲಿ ಜಲ್ಲಿ ಕಲ್ಲಿನ ರಾಶಿ, ಬಲ ಬದಿಯಲ್ಲಿ ಕೆಮ್ಮಣ್ಣಿನ ರಾಶಿ – ಮಾರ್ಗದ ನಡುವಿನ ಕೆರೆಗಳನ್ನು ಮುಚ್ಚಲಿಕ್ಕೆ ! – ಈ ರಾಶಿಗಳು ಕಳೆದ ಒಂದು ವರ್ಷದಿಂದಲೂ ರಾಶಿಯಾಗಿಯೇ ಉಳಿದಿವೆಯಲ್ಲದೆ, ಮಾರ್ಗದ ನಡುವಿನ ಕೆರೆಗಳು ಮುಚ್ಚಲ್ಪಡಲಿಲ್ಲವೆಂಬುದು ಆಶ್ಚರ್ಯಕರವಾದ ಭಯಂಕರ ಸತ್ಯ ಇದು ನಮ್ಮ ನಗರ ಸಭೆಯವರ ಕಾರ್ಯದಕ್ಷತೆ. ಬರೆಯುತ್ತ ಹೋದಲ್ಲಿ, ಒಂದು ಗ್ರಂಥವಾಗಬಹುದು – ಮಹಾಕಾದಂಬರಿಯಾಗಬಹುದು.

ಇಂತಹ ಈ ಮಾರ್ಗದಲ್ಲಿ – ಸರ್ಕಸಿನಲ್ಲಿ ಹಗ್ಗದ ಮೇಲೆ ಹುಡುಗಿಯರು ನಡೆಯುವಂತೆ – ಸೈಕಲು ಸವಾರಿ ಮಾಡಿ, ಹೋಗುತ್ತಿದ್ದಾಗ....

ಫಕ್ಕನೆ ಎಡಗಡೆಯ ಗದ್ದೆಕೇರಿ ರಸ್ತೆಯಿಂದೊಂದು ಸೈಕಲು ನನ್ನ ಸೈಕಲು ಪಥಕ್ಕೆದುರಾಯಿತು !

ಗಂಟೆ ಬಾರಿಸದೆ, ದೀಪವಿಲ್ಲದೆ, ನನ್ನೆದುರಿಗೆ ಹಾದು ಹೋಯಿತು.

ಮುಖ ನೋಡುವಷ್ಟು ವ್ಯವಧಾನವಿಲ್ಲ; ನಾನು ನನ್ನ ಸೈಕಲು ಆ ಸೈಕಲಿಗೆ ಢಿಕ್ಕಿ ಹೊಡೆಯದಂತೆ ತಪ್ಪಿಸುವುದರಲ್ಲೇ ಮಗ್ನನಾದೆ.

ಸೈಕಲು ಮುಂದೆ ಹೋದ ನಂತರ ಬೆನ್ನು ನೋಡಿದೆ.

ನೀಳವಾದ ಜಡೆ ಬಿಟ್ಟಿದೆ!

ಸೆರಗು ಗಾಳಿಗೆ ಹಾರಾಡುತ್ತಿದೆ!!

ಅಡಿಗೆ ಕೋಣೆಯಲ್ಲಿ ಮೆಟ್ಟು ಕತ್ತಿಯ ಮೇಲೆ ಕೂತಂತೆ ಕೂತಿದೆ!!!

ಅರ್ಥಾತ್ ಒಂದು ಹೆಂಗಸು!!!!

ಕ್ರೋಧ ತಾಮ್ರಾಕ್ಷನಾದೆ!

ಮೂರನೇ ಸಲವೂ ಢಿಕ್ಕಿ ಹೊಡೆಯಲಿಕ್ಕೆ ಒಂದು ಕೂದಲೆಳೆಯಷ್ಟಕ್ಕೆ ತಪ್ಪಿದೆ!

ಹಾಳಾದರೂ ಈ ಸೈಕಲ್ ಸವಾರಿ ಮಾಡುವ ಸ್ತ್ರೀಯರು!

ಕೈಯಲ್ಲಿದ್ದ ಬ್ರೇಕನ್ನು ಸಡಿಲಿಸಿ, ಆಕೆಯ ಹಿಂದೆಯೇ ಸೈಕಲನ್ನು ಓಡಿಸ ತೊಡಗಿದ.

ಆಕೆಯ ಸೈಕಲ್ ಸವಾರಿಯೆಂದರೇನು?

ಒಮ್ಮೆ ಮಾರ್ಗದ ಎಡಬದಿಗೆ, ಒಮ್ಮೆ ಬಲಬದಿಗೆ! ಮಾರ್ಗ ಎಂದರೆ ಅವಳ ಅಪ್ಪನ Private Property ಆಗಿರಬೇಕು

ನನಗಂತೂ ಕಾರ್ಯ ಬಲು ಸುಲಭವಾಯಿತು

ಡೋಂಗರಕೇರಿ ರಸ್ತೆಯಿಂದ ಕಂಬಳ ಕ್ರಾಸ್ ರೋಡಿಗೆ ತಿರುಗುವಲ್ಲಿ

ಸೈಕಲಿಗೆ ಸೈಕಲು ಢಿಕ್ಕಿ ಹೊಡೆಯಿತು!

"ಹೋಃssss" ಎಂದು ಅರಚಿ, ಮಾರ್ಗದಿಂದ ಮಾಯವಾದಳು – ಆ ಹಿಡಿಂಬೆ – ಸೈಕಲು ಸಮೇತ ಭೂಗರ್ಭದಲ್ಲಿ – ಚರಂಡಿಯಲ್ಲಿ!

ಢಿಕ್ಕಿ ಹೊಡದ ರಭಸ ಬಲವಾಗಿರಬೇಕು ನಾನೂ ಆಯ ತಪ್ಪಿ ಸೈಕಲ್ ಮೇಲಿಂದ ನೆಲಕ್ಕೆ ಬಿದ್ದೆ – ಬಲಬದಿಯಲ್ಲಿನ ಜಲ್ಲಿ ಕಲ್ಲುಗಳ ರಾಶಿಗೆ!

ಬಿದ್ದ ರಭಸಕ್ಕೆ ಜಲ್ಲಿಕಲ್ಲೊಂದು ನನ್ನ ಶಿರಃಪ್ರವೇಶ ಮಾಡಲೆಳಸಲು, "ಕೂssss" ಎಂದು ಕೂಗಿ, ಕಣ್ಣು ಮುಚ್ಚಿದೆ!

× × × ×

ಕಣ್ಣು ತೆರೆಯುವಾಗ್ಯೆ. .

ಯಾವ ಅತ್ಯುತ್ತಮ ನಾಟಕ ಕಂಪೆನಿಯಲ್ಲಿ ಕಾಣಸಿಗದಂತಹ ಭಯಂಕರ ಟ್ರಾನ್ಸ್‌ಫರ್ ಸೀನರಿ !

ಮಾರ್ಗದ ಬದಿಯಲ್ಲಿ ಜಲ್ಲಿಕಲ್ಲಿನ ರಾಶಿಯ ಮೇಲೆ ಬಿದ್ದಿದ್ದ ನಾನು ಕಣ್ಣು ತೆರೆಯುವಾಗ್ಯೆ ಆಸ್ಪತ್ರೆಯ ಕೋಣೆಯೊಂದರಲ್ಲಿ ಎದ್ದಿದ್ದೇನೆ !!

ತಲೆಗೆ, ಕೈಗೆ, ಕಾಲಿಗೆ " ಬೇಂಡೇಜು " ಕಟ್ಟಿದ್ದಾರೆ ! ತಲೆಗೆ ಕಟ್ಟಿದ " ಬೇಂಡೇಜಿ "ನಿಂದ ಕಣ್ಣು ಸಹ ಒಂದು ಮುಚ್ಚಿ ಹೋಗಿದೆ ! ಮೈ ಅಲುಗಿ ಸೋಣವೆಂದರೆ ಶತವೃಶ್ಚಿಕಗಳು ಕಡಿದಂತಹ ವೇದನೆಯಾಗುತ್ತಿದೆ !!

" ರೋಗಿಗೆ ಎಚ್ಚರವಾಗಿದೆ !" – ಎಂದಳು ತಲೆದೆಸೆಯಲ್ಲಿ ನಿಂತಿದ ನರ್ಸ್

" ಸತ್ತಿಲ್ಲವೇ ಇನ್ನೂ ನಾನು ?" ಎಂದು ಪ್ರಶ್ನಿಸಿದೆ.

" ಇಲ್ಲ, ನಿಮ್ಮ ಆಯುಶ್ಯ ಏನೋ ಗಟ್ಟಿಯಾಗಿದ್ದಿರಬೇಕು. ಮೈಯಲ್ಲೆಲ್ಲಾ ಸಹಸ್ರ ಗಾಯಗಳಾಗಿವೆ ಮಾತ್ರವಲ್ಲದೆ, ಫಕ್ಕನೆ ಸಾಯು ವಂತಿಲ್ಲ." ಅಂದಂದು ನಕ್ಕಳು ನರ್ಸ್.

" ಅವಳು ? ನಾನು ಡಿಕ್ಕಿ ಹೊಡೆದ ಸೈಕಲು ಸವಾರಿಯ ಆ ಹೆಂಗಸು ?" ಅಂದೆ.

" ಅವಳಿಗೂ ವಿಪರೀತ ಗಾಯಗಳಾಗಿವೆ. ಇದೇ ಕೋಣೆಯ ಆಚೆಯ ಮೂಲೆಯಲ್ಲಿದ್ದಾಳೆ " ಅಂದಳು ನರ್ಸ್.

ಕೋಣೆಯ ಆಚೆಯ ಮೂಲೆಗೆ ಮೆಲ್ಲನೆ ತಲೆಯನ್ನು ಹೊರಳಿಸಿದೆ.

ಕೋಣೆಯ ನಡುವಿನಲ್ಲಿ ಒಂದು " ಸ್ಕ್ರೀನ್ " ಯಾನೆ ಪರದೆ ಕಂಡು ಬಂದಿತು.

" ಹೂಂ , ಆ ಪರದೆಯ ಆಚೆ ಬದಿಯಲ್ಲಿದ್ದಾಳೆ. ಅವಳ ಗಾಯಗಳಿಗೆ ಮುಲಾಮು ಪಟ್ಟಿ ಈಗತಾನೆ ಹಚ್ಚಿ ಬಂದೆ." ಅಂದಳು ನರ್ಸ್.

ಅಷ್ಟರಲ್ಲಿ " ನರ್ಸ್.. ನರ್ಸ್ " ಎಂದು ಪರದೆಯ ಆಚೆಯಿಂದ ಕರೆದುದು ಕೇಳಿಸಿತು.

ನರ್ಸ್ ಪರದೆಯ ಸನಿಯಕ್ಕೆ ಹೋಗಿ, " ಏನು ?" ಎಂದು ಪ್ರಶ್ನಿಸಿದಳು.

" ಆ ಕಿಲಾಡಿಗೆ ಎಚ್ಚರವಾಯಿತೇ ?" ಪರದೆಯೊಳಗಿಂದ ಪ್ರಶ್ನೆ.

" ಹೂಂ , ಈಗತಾನೆ ಎಚ್ಚರವಾಗಿದೆ."

ಕಿಲಾಡಿ ? ನಾನು ? ನಾನು ಕಿಲಾಡಿಯೇ ?

ದೀಪ ಇಲ್ಲದೆ, Worng said ನಲ್ಲಿ ಮಾರ್ಗವಿಡೀ ಸೈಕಲು ಬಿಟ್ಟು ಕೊಂಡು ಹೋಗಿದ್ದಾಳೆ ! ಇವಳ ಮನೆ ಹಾಳಾಗ !

" ಕಿಲಾಡಿ ನಿನ್ನ ಅಜ್ಜ !" ಎಂದು ಅರಚಿದೆ.

ಮಂಚದಿಂದ ಎದ್ದು ಕುಳಿತೆ – ಮೈ ಇಡೀ ಗುದ್ದಿ ಇಟ್ಟಂತಾಗಿತ್ತು.

ಮಂಚದಿಂದ ಕಾಲುಗಳನ್ನು ಕೆಳಕ್ಕೆ ಇಳಿಸಿ, ನಿಂತೆ.

ಆಸ್ಪತ್ರೆಯ ಕೋಣೆ, ನರ್ಸ್, ಪರದೆ, ಗೋಡೆ – ಎಲ್ಲವೂ ಗರ್‌ಗರನೆ ತಿರುಗಲಾರಂಭಿಸಿದವು !

ಒಂದು ಕೈಯನ್ನು ತಲೆಗೊತ್ತಿಕೊಂಡು, ಒಂದು ಕೈಯಿಂದ ಗೋಡೆ ಯನ್ನು ಆಧರಿಸಿಕೊಂಡು, ಪರದೆಯ ಬಳಿ ಬಂದೆ.

" ನನ್ನ ಸೈಕಲಿಗೆ ಅಡ್ಡಡ್ಡಲಾಗಿ ಬಂದು, ಡಿಕ್ಕಿ ಹೊಡೆದಿದ್ದಾಳೆ. ಈಗ ನಾನು ಕಿಲಾಡಿಯಂತೆ ಕಲಿಸುತ್ತೇನೆ ಅವಳಿಗೆ ಬುದ್ಧಿ !" ಅಂದೆ.

ಪರದೆಯನ್ನು ಸರಿಸಿದೆ !

ಕಣ್ಣುಗಳನ್ನೇ ನಂಬದಾದೆ !

ಕಣ್ಣುಗಳನ್ನೊಮ್ಮೆ ಹೊಸಕಿಕೊಂಡು ಪುನಃ ನೋಡಿದೆ !

ಪರದೆಯ ಆಚೆಯ ಪಾರ್ಶ್ವದಲ್ಲಿ ಸೀತಾ !

ಆಕೆಯೂ ಮಂಚದ ಮೇಲೆ ಮಲಗಿದ್ದಾಳೆ ! ತಲೆಗೆ " ಬೇಂಡೇಜು " ಸುತ್ತಿದೆ !

ಪುನಃ ಸ್ಮೃತಿ ತಪ್ಪಿ, ನೆಲಕ್ಕೆ ಬಿದ್ದೆ.

---

# ಸೀತೆಯ ಹೊಟ್ಟೆನೋವು

ಅದೊಂದು ದುರ್ದಿನ!

" ಬಿದಿರು ಒಂದೊಂದಾಗಿ ಬೆಳೆಯುವುದಿಲ್ಲ ; ಕಷ್ಟಗಳು ಒಂದೊಂದಾಗಿ ಬರುವುದಿಲ್ಲ!" ಎಂಬ ಹಿರಿಯರ ಮಾತು ಸತ್ಯವಾಗಿದ್ದಿರಬೇಕು.

ನನ್ನ ಅನುಭವದಲ್ಲಿ ಅದು ರೂಪಾಯಿಗೆ ಹದಿನಾರಾಣೆಯಷ್ಟು ಸತ್ಯವಾಗಿ ಹೋಯಿತು.

ಹೇಗೆಂದರೆ ...

ಆ ದಿನ ಆಫೀಸಿನಲ್ಲಿ ನನಗೆ ಕೆಲಸ ಜಾಸ್ತಿ ಇತ್ತು! ತಿಂಗಳ ಕೊನೆಯಾದುದರಿಂದ ಆಫೀಸಿನ ಲೆಕ್ಕ ಪತ್ರಗಳನ್ನು ಆ ದಿನವೇ ಮುಗಿಸಿ ಬಿಡಬೇಕಾಗಿತ್ತು. ಅವನ್ನೆಲ್ಲಾ ಮುಗಿಸಿ, ಮನೆಗೆ ಹಿಂತೆರಳುವಾಗ ರಾತ್ರೆ ಗ್ಗಂಟೆ ಹತ್ತು ಕಳೆದಿತ್ತು. ಸಾಲದ್ದಕ್ಕೆ ಮರುದಿನ ನಮ್ಮ ಡಾಕ್ಟರರು ಕಾರ್ಯಾಂತರದಿಂದ ಮದ್ರಾಸಿಗೆ ಹೋಗುವವರಾದ್ದರಿಂದ, ಮರುದಿನವೂ ತಲೆಯೆತ್ತುವಷ್ಟಾದರೂ ಪುರುಸೊತ್ತು ಸಿಗುವ ಸಂಭವವಿರಲಿಲ್ಲ. ಅಂದಿನದನ್ನು ಮುಗಿಸಿ, ಮರುದಿನದ ಅವಸ್ಥೆಯನ್ನು ಯೋಚಿಸಿ, ಉತ್ಪನ್ನವಾದ ಮಹಾ ತಲೆಶೂಲೆಯೊಂದಿಗೆ ಮನೆಯ ಮೆಟ್ಟಲನ್ನೇರಿ, ಒಳಗಡೆ ಹೋಗಿ ನೋಡಿದರೆ....

ಸೀತಾ ಒಳಕೋಣೆಯಲ್ಲಿ ಹಾಸಿಗೆ ಬಿಡಿಸಿ, ಬಿದ್ದುಕೊಂಡಿದ್ದಾಳೆ!

ಹಾಸಿಗೆಯಲ್ಲಿ ಹೊರಳಾಡುತಿದ್ದಾಳೆ!!

ಗಳಿಗೆಗೊಮ್ಮೆ ಹೊಟ್ಟೆಗೆ ಕೈಯೊತ್ತಿಕೊಂಡು ನರಳುತಿದ್ದಾಳೆ!!!

ಗಾಬರಿಗೊಂಡೆ. ಸೀತೆಯ ಬಳಿಯಲ್ಲಿ ಕುಳಿತು, "ಏನೇ? ಏನಾಯಿತೇ ಸೀತಾ?" ಅಂದು ಪ್ರಶ್ನಿಸಿದೆ.

ಪ್ರಶ್ನೆಗೆ ಉತ್ತರವಿಲ್ಲ. ಬದಲು ಎರಡೂ ಕೈಗಳನ್ನು ಹೊಟ್ಟೆಗಿಟ್ಟುಕೊಂಡು, ಹೊಟ್ಟೆಯನ್ನು ಹಿಸುಕುತ್ತಾ, ಅಳಲಾರಂಭಿಸಿದಳು ಸೀತಾ.

"ಏನೇ? ಏನಾಯಿತೇ?" ಅಂದೆ ಪುನಃ ನಾನು.

ಹಾಸಿಗೆಯ ಉದ್ದಗಲಕ್ಕೂ ಹೊರಳಾಡಹತ್ತಿದಳು ಸೀತಾ. ನರಳುವಿಕೆಯೂ ಅಳುವಿಕೆಯೂ ಹೆಚ್ಚಾಯಿತು.

ಎಲಾ ಕರ್ಮವೇ! ಎಂತಹ ಅವಸ್ಥೆ ಇದು? ಪುನಃ ಹೇಳಿದೆ. "ಇದೋ ಸೀತಾ; ಏನಾಯಿತೆಂದು ಹೇಳುವಿಯಾದರೆ ಹೇಳು. ಇಲ್ಲವಾದರೆ ನಾನೂ ಅಳಲಾರಂಭಿಸುತ್ತೇನೆ." ಅಂದ್ಕಂದು, ಅಲ್ಲೇ ಕಾಲು ಚಾಚಿ, ತಲೆಯ ಮೇಲೆ ಕೈಯಿಟ್ಟು, ಅಳು ಸನ್ನದ್ಧನಾದೆ.

"ಅಯ್ಯೊ ऽ ऽ ऽ ऽ ऽ ऽ ऽ ऽ ऽ ऽ ಹೊಟ್ಟೆ ನೋವು ऽ ऽ ऽ ऽ ऽ ऽ ऽ ऽ" ಅಳುವಿನ ನಡುವಿನಲ್ಲಿ ಇಷ್ಟೊಂದು ಅಕ್ಷರಗಳು ಅಸ್ಪಷ್ಟವಾಗಿ ಕೇಳಿಸಿದವು.

ತಲೆಯ ಮೇಲಿಂದ ಕೈಕೆಳಗಿಸಿ, "ಅಯ್ಯೊ ऽ ऽ ऽ ऽ; ಇಷ್ಟೇನೇ? ಅದಕ್ಕಾಗಿ ಇಷ್ಟು ಅಳು – ನರಳಾಟಗಳೇ? ಮಧ್ಯಾಹ್ನಕ್ಕೆ ಬಟಾಟೆಯ ಕ್ಯಾಹುಳಿ ಮಾಡಿದ್ದೆಯಲ್ಲ ತೊಗರಿಬೇಳೆ ಹಾಕಿ! ಅದನ್ನು ಸರಿಯಾಗಿ ಹೊಡೆದೆಯೆಂದು ತೋರುತ್ತದೆ. ಬಹಳ ರುಚಿಯಾಗಿತ್ತು. ಅದರ ಪ್ರಭಾವ ಇರಬೇಕು ಇದು." ಅಂದಂದು, ಹಲವು ವರ್ಷಗಳಲ್ಲಿ ಡಾಕ್ಟರರ ಕಂಪೌಂಡರನಾಗಿದ್ದುದರ ಫಲವೆಂಬಂತೆ ಸೀತೆಯ ರೋಗ ನಿಧಾನವನ್ನು ಮುಗಿಸಿ, "ಇದಕ್ಕೆ ಜೀರಿಗೆಯ ಕಷಾಯದಲ್ಲಿ ಧನ್ವಂತರಿ ಮಾತ್ರೆಯನ್ನು ಅರೆದು ತಕ್ಕೊಂಡರೆ, ತತ್ಕ್ಷಣ ಗುಣ!" ಅಂದಂದು ನನ್ನ ಜನ್ಮ ಸಾರ್ಥಕಮಾಡಿಕೊಂಡೆ.

ನೆಟ್ಟಗೆ ಎದ್ದು, ಅಡಿಗೆಕೋಣೆಗೆ ಹೋದೆ. ಅಡಿಗೆ ಕೋಣೆ ಇಡೀ ಬುಡ ಮೇಲೆ ಮಾಡಿದರೂ ಜೀರಿಗೆ ಸಿಗಬೇಕೆ? ಎಂತಹ ಮಂದಮತಿಗಳು ಈ ಹೆಂಗಸರು! ಉಪ್ಪು, ಮೆಣಸು, ಕೊತ್ತಂಬರಿ ಸಾಸಿವೆ, ಒಳ್ಳೆ ಮೆಣಸು, ಹಿಂಗು – ಒಂದಕ್ಕಾದರೂ "ಲೇಬಲ್ಲು" ಇದೆಯೇ?.. .ಹೀಗೆ "ಲೇಬಲ್ಲು" ಇಲ್ಲದ ಪದಾರ್ಥಗಳನ್ನು ಅಂದಾಜು ಪ್ರಕಾರವೇ ಅಡಿಗೆಗೆ ಹಾಕಿ, ಒಂದಕ್ಕೊಂದು

ಆಗಿ, ಒಂದು ದಿನ ಹುಳಿಗೆ ಮೆಣಸು ಹೆಚ್ಚಾದರೆ, ಮರುದಿನ ಹುಳಿಗೆ ಉಪ್ಪೇ ಇಲ್ಲ! ನಾನು ಈ ಅಡಿಗೆ ಕೋಣೆಯ ಯಜಮಾನನಾಗಿರುತಿದ್ದರೆ, ಪ್ರತಿಯೊಂದು ಪದಾರ್ಥದ ಭರಣಿಗೂ ಒಂದೊಂದು "ಲೇಬಲ್ಲು" ಹಚ್ಚಿ, ಅಡಿಗೆಯು "ಕಂಡಾಬಟ್ಟಿ" ಯಾಗದಂತೆ ವ್ಯವಸ್ಥೆ ಮಾಡುತಿದ್ದೆ!

..ಅಂತೂ ಹುಡುಕಾಡಿ ಹುಡುಕಾಡಿ, ಕೊನೆಗೆ ಸಾಸಿವೆಯ ಡಬ್ಬದೊಳಗಿನ ಚಿಕ್ಕದೊಂದು ಭರಣಿಯಲ್ಲಿ ಜೀರಿಗೆ ಕಾಣಸಿಕ್ಕಿತು. ಸ್ವಲ್ಪ ಜೀರಿಗೆಯನ್ನು ಹುರಿದೆ. ಕಷಾಯ ಮಾಡಿದೆ. ಧನ್ವಂತರಿ ಮಾತ್ರೆ ಒಂದನ್ನು ಅದರಲ್ಲಿ ಅರೆದೆ. ಆ ಜೀರಿಗೆಯ ಕಷಾಯವನ್ನು ತಕ್ಕೊಂಡು, ಸೀತೆಯ ಕೋಣೆಗೆ ಹೋಗಿ, ಸಾಕ್ಷಾತ್ ಧನ್ವಂತರಿಯಂತೆ, "ಇದೋ ಸೀತಾ, ಇದನ್ನು ಕುಡಿ. ಐದೇ ನಿಮಿಷದೊಳಗೆ ಹೊಟ್ಟೇನೋವು ಪರಾರಿ!" ಅಂದೆ.

ಸೀತಾ ಅದನ್ನು ಕುಡಿದಳು. ನಾನು ಹಾಸಿಗೆಯ ಬಳಿಯಲ್ಲೇ ಕುಳಿತೆ.

ಐದು ನಿಮಿಷವಾಯಿತು.

ಸೀತೆಯ ಹೊಟ್ಟೆ ಹಿಸುಕುವಿಕೆ ಜಾಸ್ತಿಯಾಯಿತು!

ಹತ್ತು ನಿಮಿಷವಾಯಿತು.

ಸೀತೆಯ ನರಳುವಿಕೆ ಹೆಚ್ಚಾಯಿತು!!

ಹದಿನೈದು ನಿಮಿಷವಾಯಿತು.

ಇಷ್ಟರ ತನಕ ಹಾಸಿಗೆಯಲ್ಲೇ ಹೊರಳಾಡುತ್ತಿದ್ದ ಸೀತಾ, ಈಗ ಕೋಣೆ ಇಡೀ ಹೊರಳಾಡತೊಡಗಿದಳು!!!

ಏನು ನನ್ನ ಮಾತ್ರೆಯ ಪ್ರಭಾವ!

ನಾನಂದೆ "ಹಾಗೆ ಹೊಟ್ಟೆ ಹಿಸುಕಿ, ಹೊರಳಾಡಬೇಡ ಸೀತಾ. ಕೆಲವು ಮದ್ದುಗಳ ಗುಣ ಹಾಗೆ. ಕೊಟ್ಟ ಕೂಡಲೇ, ಕಾಯಿಲೆ ಜಾಸ್ತಿಯಾಗುತ್ತದೆ. ಆದರೆ ಕೆಲವೇ ಕ್ಷಣಗಳಲ್ಲಿ ಟಿಮ್ಮನೆ ವಾಸಿಯಾಗುತ್ತದೆ. ಮದ್ದು ಸೇವಿಸಿದ ಕೂಡಲೆ ಕಾಯಿಲೆ ಜಾಸ್ತಿಯಾಗುವುದು, ಕಾಯಿಲೆಗೆ ಮದ್ದು ನಾಟುತ್ತದೆಂಬುದರ ಕುರುಹು!" ಅಂದಂದು ಸೀತೆಯನ್ನು ಸಮಾಧಾನಪಡಿಸಲೆತ್ನಿಸಿದೆ.

ಗಂಟೆ ಹನ್ನೊಂದೂವರೆಯಾಯಿತು.

ಸೀತೆಯ ಹೊಟ್ಟೆನೋವು ಕಡಿಮೆಯಾಗಲಿಲ್ಲ!

ಪುನಃ ಯಥಾಪ್ರಕಾರ ಜೀರಿಗೆಯ ಕಷಾಯವನ್ನು ತಯಾರಿಸಿ, ಮಾತ್ರೆಯನ್ನು ಅರೆದು ಕೊಟ್ಟೆ.

ಗಂಟೆ ಹನ್ನೆರಡೂವರೆ ಹೊಡೆಯಿತು!

ಸೀತೆಯ ನರಳುವಿಕೆ ನಿಲ್ಲಲಿಲ್ಲ!!

ರಾತ್ರೆ ಇಡೀ ನಿದ್ದೆಯಿಲ್ಲ!!

ನಿದ್ದೆ ಇಲ್ಲವಾದರೆ ಸಾಯಲಿ. ಸೀತೆಯ ನರಳುವಿಕೆಯನ್ನು ನೋಡಬಲ್ಲನೇ ನಾನು? ಅರ್ಧಾಂಗಿಯಾದ ಆಕೆಯ ಹೊಟ್ಟೆ ನೋವಿನಲ್ಲಿ ಅರ್ಧಾಂಶವಾದರೂ "ಅರ್ಧಾಂಗ" ನಾದ ನನಗೂ – ಉದರ ವೇದನೆಯನ್ನಲ್ಲವಾದರೂ – ಮನೋವೇದನೆಯನ್ನಾದರೂ ಈಯಲಾರದೆ?

ಎಂತಾದರೂ ಜಾಗರಣೆಯಲ್ಲೇ ರಾತ್ರಿ ಕಳೆಯಿತು. ಸೀತೆಯ ನರಳುವಿಕೆ ನಿಲ್ಲಲಿಲ್ಲ. ಹೊಟ್ಟೆನೋವು ವಾಸಿಯಾಗಲಿಲ್ಲ.

ಇನ್ನೇನು ಮಾಡೋಣ?

ನಮ್ಮ ಡಾಕ್ಟರರನ್ನು ಕರಕೊಂಡು ಬರೋಣಾ ಅಂದರೆ ಅವರು ಮದ್ರಾಸ್ ಪ್ರಯಾಣ ಸನ್ನದ್ಧರಾಗಿದ್ದಾರೆ. ಅವರಿಗೆ ನನ್ನದೊಂದೇಕೆ ಅಪಶಕುನ?

ಮನೆಯ ಬಳಿಯಲ್ಲೇ ಡಾಕ್ಟರ್ ನರೇಂದ್ರರಾಯರ ಚಿಕಿತ್ಸಾಲಯವಿದೆ. ಅಲ್ಲಿಗೆ ಹೋದೆ. ಅವರು ಕೂಡಲೇ ಹೊರಟು ಬಂದರು. ಅವರನ್ನು ಕಂಡ ಕೂಡಲೇ ಸೀತೆಯ ನರಳುವಿಕೆ ಮತ್ತಷ್ಟು ಜಾಸ್ತಿಯಾಯಿತು.

ಡಾಕ್ಟರ್ ನರೇಂದ್ರರಾಯರು ಪರೀಕ್ಷೆ ನಡೆಸಿದರು. "ಬರೇ ವಾಯು ತುಂಬಿದೆ ಹೊಟ್ಟೆಯೊಳಗೆ. ಒಂದು ಮಿಕ್ಸ್ಚರ್ ಕೊಡುತ್ತೇನೆ. ಗಂಟೆಗೊಮ್ಮೆ ಒಂದೊಂದು ಔನ್ಸು ಕುಡಿಯಲಿ." ಅಂದರು.

ಡಾಕ್ಟರರೊಂದಿಗೆ ಅವರ ಚಿಕಿತ್ಸಾಲಯಕ್ಕೆ ಹೋಗಿ, ಮದ್ದು ತಕ್ಕೊಂಡು ಬಂದೆ.

ಬರುವಾಗ್ಯೆ – ಮನೆಯಲ್ಲಿ. ..

ಅದಕ್ಕೇನೇ ಅದೊಂದು ದುರ್ದಿನ; ಕಷ್ಟಗಳು ಒಂದೊಂದಾಗಿ ಎಂದೂ ಬರುವುದಿಲ್ಲ; – ಎಂದಂದೆ ನಾನು.

ಮನೆಯೊಳಗೆ ನೆಂಟರ ಪ್ರವೇಶವಾಗಿದೆ!

ಮೈಸೂರಿನಿಂದ ಸೀತೆಯ ವಿಮಲಾ ಚಿಕ್ಕಮ್ಮ ಮತ್ತು ಅವರ ಇಬ್ಬರು

ಹೆಣ್ಣು ಮಕ್ಕಳು – ವಿಶಾಲಾಕ್ಷಿ ಹತ್ತು ವರ್ಷದವಳು; ಚಂಚಲಾಕ್ಷಿ ಎಂಟು ವರ್ಷದವಳು !

" ಸಂಧಿಯೊಳಗೆ ಸಮಾರಾಧನೆ " ಎಂಬಂತೆ ಸೀತಾ ಹೊಟ್ಟೆನೋವಿನಿಂದ ನರಳುತ್ತಿರುವಾಗಲೇ ಈ ವಿಮಲಾ ಚಿಕ್ಕಮ್ಮನವರು ಸಕುಟುಂಬರಾಗಿ ಅತಿಥಿಯಾಗಿ ಆಗಮಿಸಬೇಕೇ ?

" ಏನು ಚಿಕ್ಕಮ್ಮ, ಕ್ಷೇಮವೇ ? ಯಾವಾಗ ಬಂದಿರಿ ?" ಅಂದೆ. ಅವರು ಸೀತೆಗೆ ಚಿಕ್ಕಮ್ಮನಾಗಿದ್ದರೂ, ನಾನೂ ಅವರನ್ನು ಚಿಕ್ಕಮ್ಮನೆಂದು ಸಂಬೋಧಿಸುವುದು ವಾಡಿಕೆ.

" ಈಗ ತಾನೇ ಬಂದೆ ರಾಮು. ಮಂಗಳೂರಿಗೆ ನಿನ್ನೆ ರಾತ್ರೆ ಬಂದಿದ್ದೆವು. ಹಾದಿಯಲ್ಲಿ ಬಸ್ಸು ಹಾಳಾಗಿ, ಮಂಗಳೂರಿಗೆ ಮುಟ್ಟುವಾಗ ಗಂಟೆ ಹನ್ನೊಂದಾಗಿತ್ತು. ಆ ರಾತ್ರೆಯ ಕತ್ತಲಲ್ಲಿ ಓಣಿಗಳನ್ನೆಲ್ಲಾ ದಾಟಿ, ಈ ಮನೆಗೆ ಬರುವುದು ಕಷ್ಟವಾದೀತೆಂದು ನಿನ್ನೆ ರಾತ್ರೆ ಹಂಪನಕಟ್ಟೆಯ ಹೋಟೆಲಿನಲ್ಲೇ ಉಳಕೊಂಡು, ಬೆಳಿಗ್ಯೆ ಎದ್ದು ಇತ್ತ ಬಂದೆವು " ಅಂದರು. " ಹೌದೇನೋ ರಾಮು, ನಾನು ಬೆಳಿಗ್ಯೆ ಮೈಸೂರಿನಿಂದ ಒಂದು ಟೆಲಿಗ್ರಾಮು ಕೊಟ್ಟಿದ್ದೆ ನಿನಗೆ – ರಾತ್ರೆಗೆ ಮಂಗಳೂರಿಗೆ ಬರುತ್ತೇನೆಂದು. ತಲುಪಲಿಲ್ಲವೇ ನಿನಗೆ ?"

ಟೆಲಿಗ್ರಾಮು ? " ಇಲ್ಲ ಚಿಕ್ಕಮ್ಮಾ, ಟೆಲಿಗ್ರಾಮು ತಲುಪಿದ್ದರೆ ಬಸ್ ಆಫೀಸಿಗೆ ನಾನು ಬರುತ್ತಿದ್ದಿಲ್ಲವೇ ? ಈ ಪೋಸ್ಟು ಡಿಪಾರ್ಟಮೆಂಟೇ ಹಾಗೆ. ಸಕಾಲಕ್ಕೆ ಕಾಗದ ಪತ್ರಗಳನ್ನು ತಲುಪಿಸುವ ಅಭ್ಯಾಸವೇ ಇಲ್ಲ " ಅಂದೆ.

" ಅದು ಸಾಯಲಿ. ಹೇಗೂ ಬಂದು ಮುಟ್ಟಿದೆವಲ್ಲ. ಏನಾಗುತಿದೆ ಸೀತೆಗೆ ? ಡಾಕ್ಟರರಿಗೆ ತೋರಿಸಿದೆಯಾ ?" ಅಂದರು.

" ಹೂ, ವಾಯುವಿನ ಉಪದ್ರವವಂತೆ. ಒಂದು ಮಿಕ್ಸ್ಚರ್ ಕೊಟ್ಟಿದ್ದಾರೆ" ಅಂದೆ.

" ಏನೋಪ್ಪ, ನೀವು ಈಗಿನ ಕಾಲದವರು. ನಿಮಗೆ ಮಿಕ್ಸಚರ್ – ಮಣ್ಣು – ಇತ್ಯಾದಿಯೇ ಆಗಬೇಕಷ್ಟೆ. ಸ್ವಲ್ಪ ಮಜ್ಜಿಗೆಗೆ ಹಿಂಗು ಸೇರಿಸಿ ಕುಡಿದರೆ, ವಾಯುವೂ ಇಲ್ಲ, ಇಂದ್ರನೂ ಇಲ್ಲ, ಆಗಲಿ; ನಿನ್ನ ಡಾಕ್ಟರರ ಮಿಕ್ಸ್ಚರೇ ಕೊಡು " ಅಂದರು.

ಸೀತೆಗೆ ಒಂದು ಔನ್ಸು ಮದ್ದು ಕುಡಿಸಿದೆ.

ಪುನಃ ಒಂದು ಗಂಟೆಯ ನಂತರ ಇನ್ನೊಂದು ಔನ್ಸು ಕುಡಿಸಿದೆ.

ಮಗದೊಮ್ಮೆ ಒಂದು ಗಂಟೆಯ ನಂತರ ಮತ್ತೊಂದು ಔನ್ಸು ಕುಡಿಸಿದೆ.

ಗಂಟೆ ಗಂಟೆಗೂ ಸೀತೆಯ ಹೊಟ್ಟೆನೋವು ಜಾಸ್ತಿಯಾಯಿತೇ ವಿನಹಾ ಕಡಿಮೆಯಾಗಲೂ ಇಲ್ಲ, ಕಡಿಮೆಯಾಗುವ ಲಕ್ಷಣವೂ ತೋರಲಿಲ್ಲ.

ಮಧ್ಯಾಹ್ನದ ಅಡಿಗೆಯನ್ನು ವಿಮಲಾ ಚಿಕ್ಕಮ್ಮನವರೇ ಮಾಡಿದರು.

ದನಗಳಿಗೆ ಅಕ್ಕಚ್ಚು ಇಡುವುದು, ಮುಸುರೆ ತಿಕ್ಕುವುದು, – ಇತ್ಯಾದಿಗಳನ್ನು ವಿಶಾಲಾಕ್ಷಿ – ಚಂಚಲಾಕ್ಷಿಯರೇ ಮಾಡಿದರು.

ಮಧ್ಯಾಹ್ನದ ಹೊತ್ತಿಗೆ ಸೀತೆಯ ಹೊಟ್ಟೆನೋವು ವಿಪರೀತವಾಯಿತು.

ಕಷ್ಟವಾಯಿತಲ್ಲ! ಇನ್ನೇನು ಮಾಡೋಣ ?

ಇವಳ ಅವಸ್ಥೆಯಲ್ಲಿ ನಾನು ಆಫೀಸಿಗೆ ಕೂಡ ಹೋಗಲಿಲ್ಲ, ಡಾಕ್ಟರರು ಮದ್ರಾಸಿಗೆ ಹೋಗಿದ್ದಾರೆ, ಕಂಪೌಂಡರ – ನಾನು – ಮನೆಯಲ್ಲೇ ಇದ್ದೇನೆ. ಚಿಕಿತ್ಸಾಲಯಕ್ಕೆ ಬಂದ ರೋಗಿಗಳಿಗೆ. ..ದೇವರೇ ಗತಿ !

ಕೇಳಿದೆ. “ಸೀತಾ, ರಥ ಬೀದಿಯಲ್ಲಿ ಯಂ.ಬಿ.ಬಿ.ಯಸ್. ಡಾಕ್ಟರರೊಬ್ಬರಿದ್ದಾರೆ. ಅವರನ್ನು ಕರಕೊಂಡು ಬರಲೇ ?”

“ಬ್ಯಾಡ್ರೀ” ಅಂದಳು ಸೀತಾ ಕ್ಷೀಣಸ್ವರದಿಂದ.

ಅವಳು ಬೇಡಾ ಅಂದಳು ಅಂತ ನಾನು ಸುಮ್ಮನೆ ಕುಳಿತುಕೊಳ್ಳಲಾಗುತ್ತದೆಯೇ ?

ಹೋಗಿ, ಯಂ. ಬಿ. ಬಿ. ಯಸ್. ಡಾಕ್ಟರರನ್ನು ಕರಕೊಂಡೇ ಬಂದೆ.

ಅವರೂ ಅರ್ಧ ಗಂಟೆ ಪರೀಕ್ಷೆ ನಡೆಸಿದರು. ಕೊನೆಗೆ “ಗಾಬರಿಯಿಲ್ಲ; ಎಂಪೆಂಡಿಸ್ಯಾಟಿಸ್ ಎಂದು ತೋರುತ್ತದೆ. ಆಪರೇಷನ್ ಆಗಬೇಕಾದೀತು. ಆದರೆ ಈಗ ಸದ್ಯಕ್ಕೆ ಒಂದು ಮಾತ್ರೆ ಕೊಡುತ್ತೇನೆ. ನಂತರ ನೋಡೋಣ.” ಅಂದರು.

ಹೋಗಿ, ಮಾತ್ರೆ ಇಸಕೊಂಡು ಬಂದೆ.

ಸೀತೆಗೆ ಕೊಟ್ಟೆ.

ಸಾಯಂಕಾಲವಾದರೂ ಸೀತೆಯ ಹೊಟ್ಟೆನೋವು ಕಡಿಮೆಯಾಗಲಿಲ್ಲ, ನರಳುವಿಕೆಯ ವೇಗ ಇಳಿಯಲಿಲ್ಲ.

ಎಪೆಂಡಿಸ್ಯಾಟಿಸ್ ! ಆಪರೇಷನ್ !! ದೇವಾ, ಎಂತಹ ಅವಸ್ಥೆಯನ್ನು

ತಂದೊಡ್ಡಿದೆ?. .ಒಮ್ಮೆ ನನ್ನ ಸೀತೆಯು ಹುಶಾರಾದಳೆಂದರೆ....ಮಹಾ ಗಣಪತಿ, ನಿನಗೆ ಐದು ರೂಪಾಯಿಯ ಪಂಚಕಜ್ಜಾಯ ಮಾಡಿಸುತ್ತೇನೆ! ಕದಿರೆಯ ಮಂಜುನಾಥಾ, ನಿನಗೊಂದು ರುದ್ರಾಭಿಷೇಕ ಮಾಡಿಸುತ್ತೇನೆ!. .. ಹರಕೆ ಹೇಳಿಕೊಂಡೆ.

ರಾತ್ರೆಯಲ್ಲಿ ವಿಮಲಾ ಚಿಕ್ಕಮ್ಮ ಅಂದರು. " ರಾಮೂ, ನಾನು ಬಂದದ್ದು ಸೀತೆಯನ್ನು ಮೈಸೂರಿಗೆ ಕರಕೊಂಡು ಹೋಗೋಣ ಅಂತ. ಅವಳಿಗೆ ಮೊದಲೇ ಕಾಗದ ಬರೆದಿದ್ದೆ. ಅವಳೂ ಆದೀತೆಂದು ಹೇಳಿದ್ದಳು ಆದ್ದರಿಂದಲೇ ಹೊರಟು ಬಂದೆ. ಆದರೆ. . ಇಲ್ಲಿ ಅವಳ ಅವಸ್ಥೆ ನೋಡುವಾಗ " ಅಂದು ಕಣ್ಣೀರು ಒರೆಸಿಕೊಂಡರು.

ನಾನೆಂದೆ. "ಹೌದು ಚಿಕ್ಕಮ್ಮಾ, ಏನು ಮಾಡೋಣ? ನಮ್ಮ ಗ್ರಹಗತಿ ಇದು. ಇಲ್ಲವಾದರೆ ನಿನ್ನೆ ಮಧ್ಯಾಹ್ನದ ತನಕ ಸೌಖ್ಯವಾಗಿದ್ದವಳಿಗೆ ಫಕ್ಕನೆ ಈ ರೀತಿ ಹೊಟ್ಟೆ ನೋವು ಆರಂಭವಾಗಬೇಕೆಂದರೆ. ? ಹೊಟ್ಟೆನೋವು ಆರಂಭವಾದರೆ ಆಯಿತು, ಇಷ್ಟು ಮದ್ದು ಕೊಟ್ಟರೂ ನಿಲ್ಲುವುದಿಲ್ಲವಲ್ಲ! .ನೀವು ಎರಡು ದಿನ ನಿಲ್ಲಿರಿ ಚಿಕ್ಕಮ್ಮ. ಅಷ್ಟರಲ್ಲಿ ಸೀತಾ ಸ್ವಲ್ಪ ಹುಶಾರಾಗಬಹುದು." ಅಂದೆ.

" ಸಾಧ್ಯವಿಲ್ಲಪ್ಪಾ ರಾಮೂ, ನನಗೆ ಉಡುಪಿಗೆ ಸೀತೆಯ ತವರು ಮನೆಗೆ ಹೋಗಬೇಕು. ಕಾರ್ಕಳದಲ್ಲಿ ನನ್ನ ಸೋದರ ಸೊಸೆ ಇದ್ದಾಳೆ, ಅಲ್ಲಿಗೂ ಹೋಗ ಬೇಕು. ಇಷ್ಟೆಲ್ಲಾ ಆಗಿ, ಒಂದು ವಾರದೊಳಗೆ ಮೈಸೂರಿಗೆ ಮನೆಗೆ ಹೋಗಲೇ ಬೇಕು. ನಾನು ನಾಳೆಯ ಬೆಳಿಗ್ಯೆಯೇ ಉಡುಪಿಗೆ ಹೊರಡುತ್ತೇನೆ." ಅಂದರು.

ರಾತ್ರೆಯಲ್ಲಿ ಸೀತೆಗೆ ಸ್ವಲ್ಪ ಆರಾಮವೆನಿಸಿತ್ತು ಎಂದು ತೋರುತ್ತಿದೆ. ನಿದ್ದೆಯೂ ಬಂದಿದ್ದಿತು.

ಮರುದಿನ ಬೆಳಗಾಗುವುದರ ಮೊದಲೇ ವಿಮಲಾ ಚಿಕ್ಕಮ್ಮನವರು ಎದ್ದು, ಹೊರಡುವ ಸಿದ್ಧತೆಯಲ್ಲಿದ್ದರು.

ಹಸುವಿನ ಹಾಲು ಕರದು, ಒಂದಿಷ್ಟು ನೀರು ಬಿಸಿವಮಾಡಿ, ಕಾಫಿ ತಯಾರಿಸಿದರು.

ನನಗೂ ಕೊಟ್ಟು, ಅವರೆಲ್ಲರೂ ಕುಡಿದು, ಸ್ವಲ್ಪ ಕಾಫಿಯನ್ನು ಸೀತೆಗೂ ತಂದು ಕೊಟ್ಟರು.

"ಏನೇ ಸ್ವಲ್ಪ ಕಡಿಮೆ ಇದೆಯೇನಮ್ಮ ಹೊಟ್ಟೆನೋವು?" ಅಂತ ಪ್ರಶ್ನಿಸಿದರು.

ಕಾಫಿಯ ಲೋಟೆಯನ್ನು ಬಾಯಿಯ ಹತ್ತಿರ ಒಯ್ಯುತ್ತಾ "ಹೂಂ" ಅಂದಳು ಸೀತಾ.

"ಹಾಗಾದರೆ ನಾನು ಉಡುಪಿ – ಕಾರ್ಕಳಗಳಿಗೆ ಹೋಗಿ, ಇತ್ತಣಿಂದಲೇ ಮೈಸೂರಿಗೆ ಹೋಗಲೇ? ಬರಬಹುದೇ ನೀನು?" ಅಂದು ಕೇಳಿದರು.

ಸೀತಾ ಕಾಫಿ ಕುಡಿದು, ಲೋಟೆ ಕೆಳಗಿಟ್ಟಳು. ಕಾಫಿ ಕುಡಿದದ್ದೇ ಕುಡಿದದ್ದು, ಎರಡೂ ಕೈಗಳನ್ನು ಹೊಟ್ಟೆಗೊತ್ತಿ, ಹಾಸಿಗೆಯ ಮೇಲೆ ಬಿದ್ದು, ನರಳಲಾರಂಭಿಸಿದಳು.

ನಾನು ಬೇಗನೆ ಯಂ. ಬಿ. ಬಿ. ಯಸ್. ಡಾಕ್ಟರರ ಒಂದು ಮಾತ್ರೆಯನ್ನು ನುಂಗಿಸಿದೆ.

ಅಷ್ಟರಲ್ಲಿ ವಿಮಲಾ ಚಿಕ್ಕಮ್ಮನವರೂ ಅವರ ಮಕ್ಕಳೂ ಹೊರಟು, ಚಾವಡಿಯಲ್ಲಿ ನಿಂತಿದ್ದರು.

ನಾನು "ಹೊರಟರೇ ಚಿಕ್ಕಮ್ಮಾ? ಇನ್ನೆಂದು ಇತ್ತ ಬರುತ್ತೀರಿ?" ಅಂದೆ.

"ಇನ್ನೊಮ್ಮೆ ಬರುತ್ತೇನೆ ಸೀತೆಯನ್ನು ಕರಕೊಂಡು ಹೋಗಲು. ಆಗಾಗ್ಯೆ ಅವಳ ದೇಹಸ್ಥಿತಿಯ ಕುರಿತು, ಪತ್ರ ಬರೆಯುತ್ತಾ ಇರು." ಅಂದರು ಚಿಕ್ಕಮ್ಮ.

"ಬರುತ್ತೇವೆ ಮಾವಾ" ಅಂದರು ವಿಶಾಲಾಕ್ಷಿ – ಚಂಚಲಾಕ್ಷಿಯರು.

"ಆಯಿತಮ್ಮಾ, ಇನ್ನೊಮ್ಮೆ ನಾಲ್ಕು ದಿನದ ಪುರಸೊತ್ತು ಮಾಡಿಕೊಂಡು ಬನ್ನಿ." ಅಂದಂದು ಅವರನ್ನು ಬೀಳ್ಕೊಟ್ಟೆ.

ಒಳಕೋಣೆಗೆ ಹೋಗುವಾಗ ಸೀತಾ ಹಾಸಿಗೆಯ ಮೇಲೆ ಎದ್ದು ಕುಳಿತಿದ್ದಳು.

"ಏನೇ ಸ್ವಲ್ಪ ಆರಾಮವೆನ್ನಿಸುತ್ತದೆಯೇ ಈಗ?" ಎಂದು ಪ್ರಶ್ನಿಸಿದೆ.

"ಹೂಂ" ಅಂದಳು ಸೀತಾ, "ಚಿಕ್ಕಮ್ಮನವರು ಹೊರಟು ಹೋದರೇ?"

"ಹೌದು. ಎಲ್ಲಿ, ಸ್ವಲ್ಪ ಏಳು ನೋಡೋಣ. ಹಾಸಿಗೆಯ ಬಟ್ಟೆ ಅಸ್ತವ್ಯಸ್ತವಾಗಿದೆ. ಸರಿಪಡಿಸುತ್ತೇನೆ." ಅಂದೆ.

ಸೀತಾ ಎದ್ದು ನಿಂತಳು.

ಹಾಸಿಗೆಯ ಬಟ್ಟೆ ಸರಿಪಡಿಸಲು ತಲೆದಿಂಬನ್ನೆತ್ತಿದೆ. ಅದರಡಿಯಲ್ಲಿ....

ಟೆಲಿಗ್ರಾಮು ಒಂದು, ಯಂ. ಬಿ. ಬಿ. ಯಸ್. ಡಾಕ್ಟರರ ಮಾತ್ರೆಗಳು ಆರು !!!

"ಏನೇ ಸೀತಾ, ಮಾತ್ರೆಗಳನ್ನು ನುಂಗಲೇ ಇಲ್ಲವೇ? ಎಲ್ಲಿಯ ಟೆಲಿಗ್ರಾಮು ಇದು ?" ಅಂದಂದು ಟೆಲಿಗ್ರಾಮನ್ನು ಬಿಡಿಸಿದೆ.

ಟೆಲಿಗ್ರಾಮು ವಿಮಲಾ ಚಿಕ್ಕಮ್ಮನವರದ್ದು !!!

ನನಗೆ ತೋರಿಸಲೇ ಇಲ್ಲ!!!!

"ಏನೇ ಇದು ಸೀತಾ ?" ಅಂದೆ.

ಸೀತಾ ನಕ್ಕಳು. "ನನಗೆ ವಿಮಲಾ ಚಿಕ್ಕಮ್ಮನವರೊಂದಿಗೆ ಮೈಸೂರಿಗೆ ಹೋಗುವ ಇಚ್ಛೆ ಇರಲಿಲ್ಲ. ನಾನು ಬರುವುದಿಲ್ಲವೆಂದರೆ ಅವರು ಕೇಳುತ್ತಾರೆಯೇ? ಎಂದಿನಿಂದಲೋ ಹಟ ಹಿಡಿದಿದ್ದಾರೆ ನನ್ನನ್ನು ತಮ್ಮ ಮನೆಗೆ ಕರೆದೊಯ್ಯಬೇಕೆಂದು. ಇನ್ನು ಅವರ ಮನೆಯಲ್ಲಿ ಅವರ ಮರ್ಜಿಯೋ, ನಾನೇನು ಮಾಡಿದರೂ ಅವರಿಗೆ ಸರಿ ಬೀಳುವುದಿಲ್ಲ. ಆದ್ದರಿಂದ ಅವರು ಬರುತ್ತಾರೆಂದು ಟೆಲಿಗ್ರಾಮು ಸಿಕ್ಕಿದ ಕೂಡಲೇ ಹೊಟ್ಟೆನೋವಿನ ವೇಷ ತಾಳಿದೆ. ನಿಜವಾಗಿಯೂ ನನಗೆ ಹೊಟ್ಟೆನೋವು ಇರಲಿಲ್ಲ" ಅಂದಳು.

ಹೊಟ್ಟೆ ನೋವು ಇರಲಿಲ್ಲ! ವೇಷ ತಾಳಿದೆ!! ನನ್ನ ಧನ್ವಂತರಿ ಮಾತ್ರೆ - ಡಾ. ನರೇಂದ್ರರಾಯರ ಮಿಕ್ಸ್‌ಚರ್ – ಯಂ. ಬಿ. ಬಿ. ಯಸ್. ಡಾಕ್ಟರರ ಗುಳಿಗೆಗಳು – ಎಲ್ಲಾ ಸುಮ್ಮನೆಯೇ? ಏನು ಬುದ್ಧಿ ಈ ಹುಡುಗೀದು!.... ಎಪೆಂಡಿಸ್ಯಾಟಿಸ್! ಆಪರೇಶನ್!!! ಡಾಕ್ಟರರ ತಲೆ!!!

ಅಲ್ಲ, ವಿಮಲಾ ಚಿಕ್ಕಮ್ಮನವರ ಕೂಡೆ ಮೈಸೂರಿಗೆ ಹೋಗುವುದನ್ನು ತಪ್ಪಿಸಲು, ಏನೆಲ್ಲಾ ಆಟ ಹೂಡಿದಳಲ್ಲ!

ಅಲ್ಲ – ಏನು ಬುದ್ಧಿ ಈ ಹುಡುಗೀದು ಅಂತ.

---

# ಗೌರೀಪೂಜೆ

ಹಟಯೋಗ – ಅಂತಾರಲ್ಲ; ಅದನ್ನು ನನ್ನ ಸೀತಾ ಚೆನ್ನಾಗಿ ಅಭ್ಯಾಸ ಮಾಡಿರಬೇಕು. ತಂದೆ – ತಾಯಿಗಳ ಏಕಮಾತ್ರ ಪುತ್ರಿಯಾದುದರಿಂದ ಬಾಲ್ಯದಲ್ಲಿ ಆಕೆಯನ್ನು ಆ ತಂದೆ – ತಾಯಿಗಳು ತಲೆಯ ಮೇಲೆ ಕುಳ್ಳಿರಿಸಿ, ಪೂಜಿಸಿರಬೇಕು. ಅಂತೂ ಬಾಲ್ಯದಿಂದಲೇ ಆಕೆಗೆ " ಹಟಮಾಡಿ ಸಾಧಿಸಿದರೆ, ಸಬಳ ನುಂಗಬಹುದು " ಎಂಬುದರ ತತ್ವ ಮಂದಟ್ಟಾಗಿರಬೇಕು.

ಅಲ್ಲವಾದರೆ, ಬಾಲ್ಯದಲ್ಲಿ ತಂದೆ – ತಾಯಿಯರೊಂದಿಗೆ ಹಟಮಾಡಿ, ಸಾಧಿಸಿ, ಸಫಲಳಾದಳೆಂಬುದರ ಬಲದಿಂದಲೇ ಈಗ ಮದುವೆಯಾದ ನಂತರ ಗಂಡನಾದ ನನ್ನ ಕೂಡೆಯೂ ಹಟವನ್ನು ಸಾಧಿಸಬೇಕೇ ?

ಆಕೆಯನುನ್ನು ಮದುವೆಯಾದೆನೇನೋ ನಿಜ. ಅಲ್ಲ ಅಂದರೆ ಮಾವ ದೊಣ್ಣೆ ಹಿಡಿದಾರು. ಆದರೆ ಲಗ್ನ ಮಂಟಪದಲ್ಲಿ ತುಳಸಿ ಎಲೆಯೊಂದಿಗೆ ನೀರು ಬಿಟ್ಟದ್ದು, ನನ್ನ ಗಂಡಸುತನಕ್ಕೇನು ? ಈಕೆಯ ಕೈ ಹಿಡಿದುದು ಈಕೆ ಎಳೆದತ್ತ ಸಾಗುತ್ತೇನೆಂಬುದರ ಪ್ರತೀಕವೇನು ? ಅಥವಾ ಇವಳ ಕೈಯಿಂದ ನನ್ನ ಕೊರಳಿಗೆ ಬಿದ್ದ ಹೂಮಾಲೆಯೆಂದರೆ ಇವಳು ನನ್ನ ಕೊರಳಿಗೆ ಹಾಕಿದ ಉರುಳೇನು ?

ಅಲ್ಲವಾದರೆ, ಈ ಹಟಮಾರಿತನವೇಕೆ ಸೀತಾಗೆ ?

ತಿಂಗಳ ಕೊನೆಯ ವಾರ. ಕೈಯಲ್ಲಿ ಕಾಸಿರುವುದಿಲ್ಲ. ಬೀಡಿ ಸೇದ

ಬೇಕಾದರೂ, ಬೇಡಿಯೇ ಸೇದಬೇಕಾದ ಸಮಯ. ಈ ವರ್ಷ ಬೇಡ, ಮುಂದಿನ ವರ್ಷದಲ್ಲಿ ನೋಡೋಣ – ಎಂದರೆ ಸೀತಾ ಕೇಳಬೇಕೇ?

ಮನುಷ್ಯರಿಗೆ ದೇವರು – ದಿಂಡರು, ದಾನ – ಧರ್ಮ; ಇತ್ಯಾದಿ ಎಲ್ಲಾ ಇರಬೇಕೆಂಬುದೇನೋ ನಿಜ. ಆದರೆ ಆ ದಾನ – ಧರ್ಮಗಳಿಗೂ ದೇವರು – ದಿಂಡರ ಸೇವೆಗೂ ಸಮಯ – ವೇಳೆ ಎಂಬುದೇ ಇಲ್ಲವೇ? ತಿಂಗಳ ಕೊನೆಯ ವಾರದಲ್ಲಿ ಭರ್ಜರಿಯಿಂದ ದೇವರ ಸೇವೆಯನ್ನು ಆರಂಭಿಸಿ, ಊರಿಗೆಲ್ಲ ಆಮಂತ್ರಿಸಿ, ಭಟ್ಟರ ಹಾಗೂ ನೆಂಟರಿಷ್ಟರ ಹೊಟ್ಟೆ ಬಿರಿಯುವಷ್ಟು ಊಟ, ಕೈಕೀಲು ಮುರಿಯುವಷ್ಟು ದಕ್ಷಿಣೆ – ಕೊಡಲಿಕ್ಕೆ ನಾನೇನು ಸರಕಾರಿ ಟಂಕಸಾಲೆಯ ಯಜಮಾನನೇ?

ಹೇಗೆಂದರೂ ಸೀತೆಯ ಗಂಟೆಗೊಂದೇ ಸ್ವರ!

"ಈ ವರ್ಷದ ಸ್ವರ್ಣಗೌರೀ ವ್ರತವನ್ನು ಬಹಳ ವಿಜೃಂಭಣೆಯಿಂದ ಮಾಡಲಿಕ್ಕೇ ಬೇಕು!"

ಎಷ್ಟೊಂದು ರೀತಿಯಲ್ಲಿ ತಿಳಿಯ ಹೇಳಿದರೂ ಅಂಗಲಾಚಿದರೂ ಸೀತೆಯ ಮನೋನಿಶ್ಚಯ ಕದಲಲಿಲ್ಲ.

ತಿಂಗಳ ಇಪ್ಪತ್ತನೇ ತಾರೀಖು ಇವತ್ತು. ಇಪ್ಪತ್ತಾರಕ್ಕೆ ಸ್ವರ್ಣಗೌರೀ ಪೂಜೆ! ಇನ್ನು ಆರೇ ದಿನಗಳು ಉಳಿದಿವೆ. ತಿಂಗಳ ಆದಿಯಲ್ಲಿ ಸಿಕ್ಕ ಸಂಬಳವನ್ನು ತಿಂಗಳ ಮಧ್ಯಭಾಗದ ತನಕ ಎಳೆಯುವುದೇ ಮಹಾ ಪ್ರಯಾಸ. ಇಂತಹ ಪರಿಸ್ಥಿತಿಯಲ್ಲಿ ಕೈ ಬರಿದಾಗಿರುವಾಗ, ಕಿಸೆ ಖಾಲಿಯಾಗಿರುವಾಗ, ಇನ್ನು ಈ ಗೌರೀಪೂಜೆಯ ಖರ್ಚನ್ನು ನಿರ್ವಹಿಸುವುದೆಂತು?....ಅದೂ ಭರ್ಜರಿಯಲ್ಲೇ ಆಗಬೇಕಂತೆ!

ಇನ್ನು ಈ ಸೀತೆಯ ಭರ್ಜರಿಯೋ?

ಪರಮಾತ್ಮಾ, ಏಕೆ ಈ ತರಹದ ತಾಟಕಿಯರನ್ನು ಸೃಷ್ಟಿಸಿದೆ? ಬ್ರಹ್ಮನು ಸೃಷ್ಟಿಕರ್ತನಂತೆ. ಅವನಿಗೆ ಚತುರ್ಮುಖಗಳಂತೆ. ಅವನ ಆ ನಾಲ್ಕು ಮಂಡೆಗಳಲ್ಲಿ ಜುಮ್ಲಾ ಕಾಲಾಣೆ ತೂಕ ಮೆದಳು ಇದ್ದದ್ದಾದರೆ, ಈ ತಾಟಕಿ – ಹಿಡಿಂಬೆಯರಂತಹ ಸ್ತ್ರೀಯರಿಗೆ ಜನ್ಮವನ್ನೇ ಕೊಡುತ್ತಿರಲಿಲ್ಲ. ಕೊಡುತ್ತಿದ್ದರೂ, ಅವರಿಗೆ ಹಿಟ್ಲರ್ – ಮುಸಲೋನಿ – ಮೆಕಾರ್ಥರ್ ಇವರಂತಹ ಮಾರೀಚ –

ಸುಬಾಹು – ಘಟೋತ್ಕಚರ ಕೊರಳಿಗೆ ಮಾಲೆ ಹಾಕುವಂತೆ ಹಣೆಬರಹ ಬರೆಯುತ್ತಿದ್ದ ! .

ಏನಾದರೇನು ? ಸೀತೆಯ ನುಡಿಗೆ ಸೈ ಎನ್ನಬೇಕಾಯಿತು.

ಮರುದಿನದಿಂದಲೇ ಆರಂಭವಾಯಿತು ಸೀತೆಯ ಭರ್ಜರಿಪೂಜೆಯ ಮಹಾ ತಯಾರಿ !

ಬೇಕಾದವರಿಗೂ ಬೇಡಾದವರಿಗೂ ಎಲ್ಲರಿಗೂ ಪತ್ರವನ್ನು ಬರೆದಾಯಿತು. ಸೀತೆಯ ಕುಟುಂಬವೆಂದರೆ ಇಷ್ಟು ದೊಡ್ಡದಿದೆ ಎಂದು ತಿಳಿದುದು ಅಂದೇ ನನಗೆ. ದೇಶದ ಯಾವ ಯಾವ ಮೂಲೆಗಳಲ್ಲಿ ಇದ್ದ ನೆಂಟರಿಷ್ಟರ ವಿಳಾಸ ಗಳನ್ನೆಲ್ಲಾ ಹುಡುಕಿ ತೆಗೆದು, ಅವರಿಗೆ ಸಪ್ರಣಾಮಪೂರ್ವಕ ಪತ್ರ ಬರೆದು, ಗೌರೀಪೂಜೆಗೆ ಆಹ್ವಾನಿಸಲಾಯಿತು. ತಿರಿದುಂಡು, ಬೇಡಿ ತಿನ್ನುವ ಯೋಗ್ಯತೆ ಇಲ್ಲದ ಹಲವಾರು ನೆಂಟರಿಗೆ - ನಿಮ್ಮ ಖರ್ಚನ್ನು ಕೂಡಾ ನಾವೇ ವಹಿಸುತ್ತೇವೆ. ಅಗತ್ಯವಾಗಿ ಬನ್ನಿ – ಎಂದೂ ಪತ್ರದ ಅಡಿಯಲ್ಲಿ ತಾಜಾಕಲಂ ನೇರಿಸಲಾಯಿತು. ಆಕೆಯ ಪೂಜೆಗೆ ಮಂಗಳೂರಿನ ಭಟ್ಟರಾರೂ ಸರಿಕಾಣದೆ ಕಾಂತಾವರದಿಂದ ಪುರೋಹಿತ ಭಟ್ಟರೊಬ್ಬರನ್ನು ಕರೆತರುವ ಏರ್ಪಾಡಾಯಿತು. ಸಾಮಾನ್ಯ ಐನೂರು ಜನರು ಪ್ರಸಾದಭಕ್ಷಣಕ್ಕೆ ಬಂದಾರೆಂದು ಅಂದಾಜುಮಾಡಿ, ಅದಕ್ಕೆ ಬೇಕಾದ ಸಾಮಾಗ್ರಿಗಳನ್ನು–ಅಂಗಡಿಗಾರರ ಕೈಕಾಲು ಹಿಡಿದು, ಸಾಲವೆತ್ತಿ,– ತಂದಾಯಿತು. ಅಡಿಗೆಗೆ ಕಟೀಲಿನಿಂದ ಒಬ್ಬ ಅಡಿಗೆ ಭಟ್ಟರನ್ನು ಬರಹೇಳಿ ಯಾಯಿತು. ಅಂಗಳಕ್ಕೆ ಚಪ್ಪರ ಹಾಕಿಯಾಯಿತು. ಮನೆಗೆ ಸುಣ್ಣ ಬಳಿ ದಾಯಿತು.

ಏನಿದು ? ಸೀತೆಗೆ ಮದುವೆಯೇ ? ಎಂದು ಕೇಳಬೇಡಿ! ನಾನೂ ಹಾಗೇನೇ ಕೇಳಿದೆ.

ಅದಕ್ಕೆ ಸೀತಾ ಹೇಳಿದಳು. " ನೋಡಿ, ಮದುವೆಯಾಗಿ ಐದು ವರ್ಷ ವಾದರೂ ನಮಗೆ ಮಕ್ಕಳಾಗಲಿಲ್ಲ. ಅದಕ್ಕಾಗಿ ನಾನೂ ಗೌರೀಮಾತೆಗೆ ಹರಕೆ ಹೇಳಿಕೊಂಡಿದ್ದೆ. ಅದರ ಫಲವಾಗಿ ಎರಡು ಹೆಣ್ಣು – ಎರಡು ಗಂಡು ಮಕ್ಕಳನ್ನು ಆ ಮಹಾತಾಯಿ ನಮಗೆ ಕೊಟ್ಟಿದ್ದಾಳೆ " ಇನ್ನು ಎಷ್ಟೊ ಉದ್ದ ವ್ಯಾಖ್ಯಾನ. ಕೇಳಿದರೆ, ಆಸ್ಪ್ರೋ ಗುಳಿಗೆ ನುಂಗಬೇಕಾದೀತು.

ಏನು ಮಹಾತಾಯಿ ! ಏನು ಮಕ್ಕಳನ್ನು ದಾನಮಾಡಿದ್ದಾಳೆ ?

ಸೀತೆಯನ್ನು ವಿವಾಹವಾಗಿ, ಗಂಡನೆಂದು ಕರೆಸಿಕೊಂಡವ ನಾನು! ಮಕ್ಕಳನ್ನು ಕೊಟ್ಟದ್ದು ಆ ಮಹಾತಾಯಿಯಂತೆ! ಮದುವೆಯಾಗಿ ಐದು ವರ್ಷ ಮಕ್ಕಳಾಗಲಿಲ್ಲವೇನೊ ನಿಜ. ಆದರೆ ಆ ಐದು ವರ್ಷಗಳಲ್ಲೂ ಸಿಕ್ಕ ಸಿಕ್ಕ ವೈದ್ಯರ – ಡಾಕ್ಟರರ ಕಾಲು ಹಿಡಿದು, ಮದ್ದು ಮಾಡಿಸಲಿಲ್ಲವೇ? ಸಂತಾನ ಸಿಂಧೂರ; ಸುಕುಮಾರಘೃತ ಇತ್ಯಾದಿಗಳ ಸೇವನೆಯಿಂದ ಏಕೆ ಮಕ್ಕಳಾಗಿರ ಕೂಡದು?....

ಹೋಗಲಿ, ಸೀತೆಯೊಡನೆ ತರ್ಕಮಾಡುವದೂ ಬಂಡೆಕಲ್ಲಿನ ಮೇಲೆ ನೀರೆರೆಯುವುದೂ ಒಂದೇ–ಎಂದು ಎಷ್ಟೋ ವರ್ಷಗಳ ಹಿಂದೆ ಅನುಭವವಾಗಿದೆ.

ಎರಡು ದಿನಗಳ ಮೊದಲೇ ನೆಂಟರಿಷ್ಟರ ಆಗಮನಕ್ಕೆ ಆರಂಭವಾಯಿತು. ಉಡುಪಿಯಿಂದ ಅವಳ ತಂದೆ – ತಾಯಿ, ಅಣ್ಣ, ಅತ್ತಿಗೆ ಇತ್ಯಾದಿ ಒಂದು ಸಂಸಾರವೇ ಹಾಜರಾಯಿತು. ಕಾರ್ಕಳದಿಂದ ಅಕ್ಕ – ಭಾವ ಇವರದೊಂದು ಚಿಕ್ಕ ಪಡೆ; ಮೂಡಬಿದರೆಯಿಂದ ಅವಳ ಚಿಕ್ಕಪ್ಪನ ಒಂದು ಕುಟುಂಬ – ಇನ್ನು ಎಲ್ಲೆಲ್ಲಿಂದ ಯಾರೆಲ್ಲ ಬಂದರೆಂದು ಬರೆಯುವುದೆಂದರೆ ಒಂದು ರಾಮಾಯಣ ವಾದೀತು. ಈ ಪುಸ್ತಕದ ಪುಟ ಸಾಕಾಗಲಿಕ್ಕಿಲ್ಲ.

ಮುನ್ನಾದಿನ ಕಾಂತಾವರದಿಂದ ಪುರೋಹಿತರೂ ಕಟೀಲಿನಿಂದ ಅಡುಗೆ ಯವರೂ ಸಿದ್ಧರಾದರು. ಐನೂರು ಜನರ ಸಂತರ್ಪಣೆಗೆ ಅನುವಾಯಿತು. ಭೋಜನಕ್ಕೆ ರವಾಲಾಡು, ಬೂಂದಿಲಾಡು, ಜಿಲೇಬಿ ಹೀಗೆ ಮೂರು ಭಕ್ಷ್ಯ ಗಳನ್ನೂ ಕಡಲೆ ಬೇಳೆಯ ಪಾಯಸ, ಹೆಸರು ಬೇಳೆಯ ಪಾಯಸ ಹಾಗೂ ಮಾವಿನ ಹಣ್ಣಿನ ರಸಾಯನ – ಇವಿಷ್ಟನ್ನೂ ತಯಾರಿಸುವುದೆಂದಾಯಿತು.

ಇಷ್ಟೆಲ್ಲ ಆಗುವಾಗ್ಯೆ ರಾತ್ರೆಯ ಹೊತ್ತಿಗೆ ಒಂದು ವಿಚಾರದ ಪ್ರಸ್ತಾವನೆ ಯಾಯಿತು. ಇಷ್ಟೆಲ್ಲ ಭರ್ಜರಿಯಿಂದ ಆಗುತ್ತಿರುವಾಗ, ವಾಲಗ (ವಾದ್ಯ) ದವರು ಬೇಡವೇ?... ಈ ಸೂಚನೆಯನ್ನು ತಂದ ಹೆಮ್ಮಾರಿ – ಶೂರ್ಪನಖಿ ಯಾರೆಂದು ಸಂಪೂರ್ಣ ತಿಳಿಯದು. ಆದರೂ ಆ ಸೂಚನೆ ಕೇಳಿ, ನನ್ನ ಸೀತೆಯ ಹಿತ್ತಾಳೆ ಕಿವಿ ನೆಟ್ಟಗಾಯಿತು. ಕೊಯಂಬತ್ತೂರಿನಿಂದ ವಾಲಗ ದವರನ್ನು ಕರೆಸುವಷ್ಟು ವ್ಯವಧಾನವಿಲ್ಲ. ರಾತ್ರೆಯಲ್ಲೇ ಎರಡು ಮೈಲು ದೂರವಿದ್ದ ಒಬ್ಬ ವಾಲಗದವನ ಮನೆಗೆ ಓಡಿ, ಅವನಿಗೆ ಮರುದಿನ ಪ್ರಾತಃಕಾಲಕ್ಕೇನೇ ಉದಯರಾಗದೊಂದಿಗೆ ಹಾಜರಾಗುವಂತೆ ಹೇಳಿ ಬಂದೆ.

ಆ ರಾತ್ರೆ ನಿದ್ದೆಯ ಹವ್ಯಾಸವಿದೆಯೇ? ಏನು ಗಲಭೆ? ಏನು ಗಲಾಟೆ? ನನ್ನ ಮದುವೆಯ ಕಾಲದಲ್ಲಿ ಮದುವೆಯ ಮನೆಯಲ್ಲಿ ಸಹ ಇಂತಹ ಗಲಭೆ ನಾನು ಕೇಳಿರಲಿಲ್ಲ.

ಅಂತೂ ಗೌರೀಪೂಜೆಯ ಪ್ರಾತಃಕಾಲ ಸೂರ್ಯೋದಯವಾಯಿತು.

ಅಡುಗೆಯ ಭಟ್ಟರು ಸ್ನಾನಮಾಡಿ, ಅಡುಗೆಯ ಕೋಣೆಯಲ್ಲಿ ಅಡುಗೆಯ ಸಿದ್ಧತೆಯಲ್ಲಿ ಮುಳುಗಿದರು. ಪುರೋಹಿತಭಟ್ಟರು ಸ್ನಾನಮಾಡಿ, ದೇವರ ಕೋಣೆಯಲ್ಲಿ ಕುಳಿತು, ರಂಗೋಲೆ ಹಾಕಲಾರಂಭಿಸಿದರು. ವಾಲಗದವನು ಬಂದು, ತನ್ನ ಗಾರ್ದಭ ಸ್ವರ ಹೊರಡುವ ನಾಗಸ್ವರದಿಂದ "ಘೆರ ಆಯಾ ಮೇರಾ ಪರದೇಸಿ" ಎಂಬ ಹಾಡನ್ನು ಹೊರಡಿಸತೊಡಗಿದ. ಅರ್ಧನಿದ್ದೆಯಿಂದ ಎಚ್ಚತ್ತ ಮಕ್ಕಳ ಆರ್ಭಟೆ – ಅವರನ್ನು ಸಮಾಧಾನಪಡಿಸಲಿಕ್ಕಾಗದ ಕೆಲ ಹೆಂಗುಸರ ಕೋಪದ ಗರ್ಜನೆ – ಪರಮಾತ್ಮಾ, ಕಿವಿ ಕಿವುಡಾಯಿತು. ಕೊರಿಯಾದ ಯುದ್ಧರಂಗದಲ್ಲಿ ಕೂಡಾ ಇಂತಹ ಗಲಭೆ ಇದ್ದಿರಕ್ಕಿಲ್ಲ! .

ಪುರೋಹಿತರು ರಂಗೋಲೆ ಹಾಕಿಯಾಯಿತು. ಒಂದು ಸೇರು ಅಕ್ಕಿಯ ಮೇಲೆ ಎರಡು ತೆಂಗಿನಕಾಯಿಗಳನ್ನಿಟ್ಟು, ಗಣಪತಿಯ ಆವಾಹನೆಯಾಯಿತು. "ಗೌರೀಪೂಜೆಗೆ ಇನ್ನು ಆರಂಭಮ್ಮಾಡೋಣ. ಎಲ್ಲಿ ಸ್ವಾಮಿಾ, ಕರೆಯಿರಿ ನಿಮ್ಮ ಯಜಮಾನಿಯನ್ನು!" ಎದರು ಪುರೋಹಿತರು.

ಯಜಮಾನಿ? ನನಗೆ ಯಜಮಾನಿ ಯಾರು? ಇದು ನನ್ನ ಸ್ವಂತ ಮನೆ! ಇದಕ್ಕೆ ಯಜಮಾನಿ ನಾನು!. ..ಕಕ್ಕಾವಿಕ್ಕಿಯಾದೆ.

ಪುರೋಹಿತರೆಂದರು "ಮುಹೂರ್ತ ಮಿಾರಿಹೋದೀತು. ಬೇಗನೆ ಕರೆಯಿರಿ ನಿಮ್ಮ ಯಜಮಾನಿಯನ್ನು!"

ಮೆಲ್ಲನೆ ತಲೆ ತುರಿಸುತ್ತಾ "ಯಜಮಾನಿ ಅಂದರೆ..."

"ನಿಮ್ಮ ಹೆಂಡತಿ. ಕರೆಯಿರಿ ಬೇಗ!" ಅಂದರು.

ನೋಡಿ ಏನು ಮಜಾ! ಗಂಡನಿಗೆ ಹೆಂಡತಿ ಯಜಮಾನಿ ಅಂತೆ, ಹೆಂಡತಿಗೆ ಗಂಡ ಯಜಮಾನ ಅಂತೆ. ಇವರೊಳಗೆ ಯಾರು ಯಾರ ಮೇಲೆ ಅಧಿಕಾರ ನಡೆಸಬಹುದು – ಎಂಬ ವಿಷಯ ಬಹಳ ಗಹನವಾದದ್ದು. ಇನ್ನೊಂದು ದಿನ ಯೋಚಿಸೋಣ.

ಸೀತೆಯನ್ನು ಕರೆಯ ಹೊರಟೆ.

ಅಡಿಗೆ ಕೋಣೆಯೊಳಗೆ ಹೋಗಿ, "ಯಜಮಾನೀ!" ಎಂದು ಕರೆದೆ.

ಅಲ್ಲಿಲ್ಲ!

ಬಚ್ಚಲು ಕೋಣೆಗೆ ಹೋಗಿ, "ಮಹಾರಾಣೀ!" ಅಂದೆ.

ಅಲ್ಲಿಯೂ ಇಲ್ಲ!!

ಚಪ್ಪರದ ನಡುವಿನಲ್ಲಿ ನಿಂತು, "ಸೀತಾ!" ಎಂದು ಕೂಗಿದೆ.

ಅಲ್ಲಿಯೂ ಕಾಣೆ!!!

ಮಾಳಿಗೆಯ ಮೇಲೆ ಹತ್ತಿ, ಹುಡುಕಾಡಿದೆ.

ಅಲ್ಲಿಯೂ ಇಲ್ಲ!!!!

ಅಷ್ಟರಲ್ಲಿ ನನ್ನ ಮಗಳು – ಎಂಟು ವರ್ಷದ ಮೀರಾ ಬಂದಳು. "ಅಪ್ಪಾ, ಅಮ್ಮ ಕರೀತಾರೆ!"

ಅಮ್ಮ ಕರೀತಾರೆ? ಆ ಅಮ್ಮನನ್ನು ಅರ್ಧಗಂಟೆಯಿಂದ ನಾನು ಕರೀತಾ ಇದ್ದೀನೆ! ಅವಳ ಕಿವಿ ಕಿವುಡಾಗಿದೆಯೇ?

"ಎಲ್ಲಿದ್ದಾಳೆ ಅಮ್ಮ?" ಎಂದು ಕೇಳಿದೆ.

"ನೆರಮನೆ ಭಟ್ರ ಜಗಲಿಯಲ್ಲಿ ಕೂತಿದ್ದಾರೆ!" ಅಂದಳು ಮೀರಾ.

ನೆರಮನೆ ಭಟ್ರ ಜಗಲಿಯಲ್ಲಿ? ಪುರೋಹಿತರು ರಂಗೋಲೆ ಹಾಕಿ, ಪೂಜೆ ಆರಂಭಿಸಲು ಕರೆಯುತ್ತಾ ಇದ್ದಾರೆ. ಈಕೆ ಹಾಯಾಗಿ ನೆರೆಮನೆ ಭಟ್ರ ಜಗಲಿಯಲ್ಲಿ ಕೂತಿದ್ದಾಳೆ! ವಾಲಗದವರು "ಘರ ಆಯಾ ಮೇರಾ ಪರದೇಸಿ" ಯನ್ನು ಬಿಟ್ಟು "ಭಾಗ್ಯದ ಲಕ್ಷ್ಮೀ ಬಾರಮ್ಮಾ ನಮ್ಮಮ್ಮಾ" ಅಂತ ಅರಚುತ್ತಾ ಇದ್ದಾನೆ, ಇವಳು ಹಾಯಾಗಿ, ನೆರೆಮನೆ ಜಗಲಿಯಲ್ಲಿ ಕೂತಿದ್ದಾಳೆ!, ಏನು ಇವಳಿಗೆ ಧಾಡಿ ಬಡಿದಿದೆ! ಕೋಪದಿಂದ ಸರ್ರನೆ ಮಾಳಿಗೆಯ ಮೆಟ್ಟಲು ಗಳನ್ನು ಇಳಿದು, ನೆರೆಮನೆಗೆ ಧಾವಿಸಿದೆ.

ನೆರೆಮನೆ ಜಗುಲಿಯಲ್ಲಿ ಒಂದು ಮೂಲೆಯಲ್ಲಿ ಕೂತಿದ್ದಾಳೆ ಸೀತಾ. ಕೂದಲು ಕೆದರಿದೆ, ಬಾಚಿರಲಿಲ್ಲ. ಸ್ನಾನಕ್ಕೆಂದು ಹೊರಟಿದ್ದಳೆಂದು ತೋರುತ್ತದೆ, ಚಿಕ್ಕಬಟ್ಟೆಯನ್ನು ಉಟ್ಟಿದ್ದಾಳೆ. ಕಣ್ಣುಗಳಲ್ಲಿ ಒಂದೇ ಸವನೆ ಧಾರಾಕಾರವಾಗಿ ನೀರು!

ಅವಳ ಕಣ್ಣಲ್ಲಿ ನೀರನ್ನು ಕಂಡು ನನ್ನ ಹೃದಯದೊಳಗಿನ ಕ್ರೋಧ ಇಂಗಿತು. "ಏನಾಯಿತೇ ಸೀತಾ? ಪುರೋಹಿತರು ಕರೆಯುತಿದ್ದಾರೆ" ಅಂದೆ.

ಸೀತಾ ಕಣ್ಣೊರೆಸಿಕೊಂಡು ಹೇಳಿದಳು. "ಪುರೋಹಿತರೇ ಪೂಜೆ ಮುಗಿಸಲಿ ಪೂಜೆ ಆದನಂತರ ಬಂದವರಿಗೆ ಊಟ ಹಾಕಿ. ನನಗೆ ಮನೆಯೊಳಗೆ ಪ್ರವೇಶ ಮಾಡಲಾಗುವುದಿಲ್ಲ! ಸ್ತ್ರಿ ಜನ್ಮಕ್ಕೆ ಬಂದ ಶಾಪ! ಇದು ಇನ್ನೊಂದು ದಿನ ತಡೆದು ಬಂದಿದ್ದರೆ ಏನಾಗುತಿತ್ತು" ಎಂದು ಗೋಳೋ ಎಂದು ಅಳಲಾರಂಭಿಸಿದಳು.

ಏನು ದೈವದ ಆಟ!

ಎಷ್ಟು ವಿಜೃಂಭಣೆಯಿಂದ ಮಾಡಲೆಳಸಿದ ಪೂಜೆ! ಸೀತೆಗೆ ಅದರಲ್ಲಿ ಪಾಲುಗೊಳ್ಳುವಷ್ಟು ಯೋಗ್ಯತೆ ಇಲ್ಲ!

ವಾದ್ಯದ ಘೋಷ ಕೇಳುತ್ತಿದೆ. ಪುರೋಹಿತರು ಮಂಟಪದಲ್ಲಿ ಮೂರ್ತಿಯನ್ನಿಟ್ಟು, ಸ್ವರ್ಣಗೌರೀಪೂಜೆಯನ್ನು ಆರಂಭಿಸುತ್ತಾರೆ! ಆದರೆ ನನ್ನ ಈ ಸ್ವರ್ಣಗೌರಿ ನೆರೆಮನೆಯ ಜಗುಲಿಯ ಒಂದು ಮೂಲೆಯಲ್ಲಿ ಕೂತಿದ್ದಾಳೆ!!

ಏನು ವಿಧಿವಿಲಾಸ!

---

# ಮನೆಯೊಳಗಿನ ಮಹಾಯುದ್ಧ

" ನ ಸ್ತ್ರೀ ಸ್ವಾತಂತ್ರ್ಯಮರ್ಹತಿ " ಎಂದು ಸ್ಮೃತಿಗಳು ಕೂಗಿದವು.

" ಸ್ತ್ರೀಯೆಂದರೆ ಪುರುಷನ ಅಡಿಯಾಳು " ಎಂದು ನನ್ನ ಅಂತರಾತ್ಮವು ಆರ್ಭಟಿಸಿತು.

" ಸ್ತ್ರೀಯನ್ನು ಅಂಕೆಯಲ್ಲಿಟ್ಟುಕೊಳ್ಳಲಾರದವನು ಪುರುಷನಲ್ಲ, ಮೀಸೆ ಹೊತ್ತ ಗಂಡಸಲ್ಲ, ಬರೇ ಹೇಡಿ ಹೆಂಗಸು !" ಎಂದು ನನ್ನ ಪರಮ ಮಿತ್ರ ನಾರಣಪ್ಪನು ಐದು ವರ್ಷಗಳ ಹಿಂದೆ ಹೇಳಿದ ಮಾತು ನನ್ನ ಕಿವಿಗಳಲ್ಲಿ ಇಂದು ಪ್ರತಿಧ್ವನಿಸಿತು.

ಹೃದಯವನ್ನು ಕಲ್ಲಾಗಿಸಿದೆ, ಶೇಕ್ಸ್‌ಪಿಯರನ " ಟೇಮಿಂಗ್ ಆಫ್ ದಿ ಶ್ರೂ " ಎಂಬ ನಾಟಕವನ್ನು ಜ್ಞಾಪಿಸಿದೆ. ದೇವಿ ಮಹಾತ್ಮ್ಯೆಯೊಳಗಿನ " ಕಿಂ ಪುನಃ ಸ್ತ್ರೀ ತ್ವಮೇಕಿತಾ ?" ಎಂದು ಅರಚಿದೆ. ಸೀತೆಯ ಕೈಯನ್ನು ಹಿಡಿದೆಳೆದೆ. ಹೇಳಿದೆ !

" ಸೀತಾ, ಇದು All India Woman's Conference ಅಲ್ಲ, ರಾಣಿ ಮಂಗಲೆಯ ಸ್ತ್ರೀ ರಾಜ್ಯವೂ ಅಲ್ಲ. ಇದು ನನ್ನ ಏಕಚಕ್ರಾಧಿಪತ್ಯ, ರಾಮ ರಾಜ್ಯ ಇಲ್ಲಿ ನಾನು ಹೇಳಿದ ಮಾತೇ ಕಾನೂನು – ಕಾಯಿದೆ. ಇಂದು ನೀನು ಮನೆ ಬಿಟ್ಟು ಹೊರಡಲಾರೆ. ನೀನಿಂದು ಸಿನೆಮಾವನ್ನು ನೋಡಲಾರೆ.

ನಿನ್ನ ಎಂಟಾಣೆಯ ಟಿಕೇಟೊಂದು ಬಾಕಿಯುಳಿದು, ಆ ಬ್ರಹ್ಮ ಕಪಾಲ ಟಾಕೀಸ್ ದಿವಾಳಿಯೆಂದರೆ ಆಗಲಿ. ನಿನ್ನನ್ನಿಂದು ಬಿಡಲಾರೆ."

ಎಂದು ಆರ್ಭಟಿಸಿ, ಕೀಚಕನನ್ನು ಜ್ಞಾನಿಸಿ, ದುಶ್ಯಾಸನನನ್ನು ಧ್ಯಾನಿಸಿ, ಸೀತೆಯನ್ನು ಕೋಣೆಯೊಳಗೆ ದೂಡಿ, ಕದವನ್ನಿಕ್ಕಿದೆ.

× × × ×

ಅಲ್ಲ, ನೀವೇ ಹೇಳಿ–ನಾನು ಮಾಡಿದ್ದೊಂದು ಮಹಾಪರಾಧವಾಯಿತೇ? ನೀವೇ ಯೋಚಿಸಿ – ದಿನವಿಡೀ ಆಫೀಸಿನ ಕೆಲಸದಲ್ಲಿ ಬಳಲಿ, ಬೆಂಡಾಗಿ, ಸೋತು, ಸುಣ್ಣಾಗಿ, ಹಣ್ಣಾಗಿ, ಸಾಯಂಕಾಲವಾಗಲು, ಕೊನೆಗಾದರೂ ಮನೆ ಯೆಂಬ ಗೂಡನ್ನು ಸೇರಿ, ಹೆಂಡತಿಯೆಂಬ ಹಕ್ಕಿಯೊಡನೆ ಚಕ್ಕಂದವಾಡಬಹು ದೆಂದು ಮನೆ ಸೇರಲಾಶಿಸಿದ ನೀವು, ಮನೆಯ ಮೆಟ್ಟಿಲನ್ನೇರುವಾಗ, ನಿಮ್ಮ ಪ್ರೀತಿಯ ಹಕ್ಕಿಯು, ಸರ್ವಾಲಂಕಾರ ಸಂಭ್ರಮದೊಂದಿಗೆ ಗೂಡಿನ ಬಾಗಿಲನ್ನು ತೆರೆದು, ಸಿನೆಮಾಕ್ಕೆ ಹಾರುವ ಯೋಚನೆಯಲ್ಲಿದ್ದರೆ, ನಿಮ್ಮ ಮನಸ್ಸು ಹೇಗಾದೀತು? ಅಲ್ಲ, ನೀವೇ ಹೇಳಿ – ನಿಮ್ಮ ಭಾವನೆಯೆಂತು ತಿರುಗೀತು? ಸಂಸಾರವನ್ನು ತ್ಯಜಿಸಿ, ಬುದ್ಧನಂತೆ ವಿರಾಗಿಯಾಗೋಣ ಎಂದು ಕೂಗದೇ ನಿಮ್ಮ ಮನಸ್ಸು? ಹೆಂಗುಸಿನ ಸೌಖ್ಯವಾದ ದುಂಡು ಮೊಗದ ಸೌಂದರ್ಯಕ್ಕೆ ಮರುಳಾಗಿ, ಗೃಹಸ್ಥಾಶ್ರಮಕ್ಕೆ ಧುಮುಕಿದ ಬಗ್ಗೆ ಪಶ್ಚಾತ್ತಾಪದಿಂದ ಬೇಯದೇ ನಿಮ್ಮ ಮನ? ಅಲ್ಲ, ನೀವೇ ಹೇಳಿ!

ನನಗೂ ಅಂತೆಯೇ ಆಯಿತು. ಆ ದಿನ ಆಫೀಸಿನಲ್ಲಿ ಕೆಲಸವೆಂದರೆ ಮೂರು ಜನರಿಗೆ ಸಾಕಾಗುವಷ್ಟು! ಪ್ರತಿದಿನ ನಾವು ಮೂರು ಜನ ಕಂಪೌಂಡರರು ಇರುತ್ತೇವಾದರೂ, ಭರಣಿ – ಕೃತ್ತಿಕೆಯ ಆ ದಿನ ಒಬ್ಬನಿಗೆ ಅಮಾವಾಸ್ಯೆ – ಸಮುದ್ರ ಸ್ನಾನಕ್ಕಾಗಿ ರಜೆ, ಮತ್ತೊಬ್ಬನ ಹೆಂಡತಿ ಹೆತ್ತಳಂತೆ, ಮನೆಯಿಂದಲೇ ಚೀಟು ಬರೆದು, ಫ್ರೆಂಚ್ ಲೀವ್! ಹೀಗಾಗಿ ಮೂರು ಜನರ ಹೊರೆಯನ್ನು ನನ್ನೊಬ್ಬನ ತಲೆಯೇ ಹೊರಬೇಕಾಯಿತು. ಅದರಲ್ಲೂ ಈ ಧನಿ ಗಳೆಂದರೆ ಕೇಳಬೇಕೇ? ಈಚೆಯವ ಊಟಮಾಡಿದನೋ ಇಲ್ಲವೋ–ತಮ್ಮಂತೆ ಅವನಿಗೂ ದಣಿವು, ಹಸಿವು ಬಾಯಾರಿಕೆ ಇದೆ – ತಮ್ಮಂತೆ ಅವನೂ ಒಂದು ಮನುಷ್ಯ ಪ್ರಾಣಿ – ಎಂಬ ಭಾವನೆಯಾದರೂ ಇದೆಯೋ ಅವರಿಗೆ? ಅದರ ವಿಚಾರ ಬಿಟ್ಟುಬಿಡಿ. ಹನ್ನೆರಡು ಗಂಟೆ ಹೊಡೆದೊಡನೆ "ಕಂಪೌಂಡರ್

ನಾನು ಮನೆಗೆ ಹೋಗಿ, ಸ್ನಾನ ತೀರಿಸಿ ಬರುತ್ತೇನೆ. ರೋಗಿಗಳು ಬಂದರೆ ಸ್ವಲ್ಪ ಕುಳಿತುಕೊಳ್ಳಲು ಹೇಳು" ಎಂದಂದು ಮನೆಗೆ ಹೋದರೆಂದರೆ, ಸ್ನಾನ ಮುಗಿಸಿ, ಊಟ ತೀರಿಸಿಯೇ ಬರುತ್ತಾರೆ. ಈ ಕಂಪೌಂಡರರಾದರೂ, ಡಾಕ್ಟರರ ಬೆನ್ನು ಕಂಡಕೂಡಲೇ, "ಆರ್ಡರ್ಲಿ"ಯನ್ನು ಕರೆದು, "ಸುಬ್ಬಾ, ನಾನು ಈಗ ಬರುತ್ತೇನೆ. ರೋಗಿಗಳು ಬಂದರೆ, ಅವರನ್ನು ಆ "ಕನ್ಸಲ್ಟಿಂಗ್ ರೂಮಿ" ನಲ್ಲಿಟ್ಟು ಬಾಗಿಲೆಳೆದುಕೊ" ಅಂತಂದು, ಸೈಕಲ್ ಹತ್ತಿ, ಮನೆಗೆ ಹೋಗಿ, ಊಟ ತೀರಿಸಿ, ಬಂದರೋ ಬದುಕಿದರು. ಇಲ್ಲವಾದರೆ "ಭಾದ್ರಾಪ್ಟಮ್ಯಾಂ ಕೃಷ್ಣಪಕ್ಷೇ ನಿರಾಹಾರೋ ಜನಾರ್ದನ!" ಈ ಕರ್ಮಕ್ಕಾಗಿಯೇ "ಧನಿ"ಗಳೆಂಬ ಒಂದು ಪ್ರಾಣಿವರ್ಗ ಬಿಟ್ಟು, ಉಳಿದ ಜಂತುಗಳೆಲ್ಲಾ ಕಮ್ಯುನಿಸ್ಟರಾಗಿರುತ್ತಾರೆಂದು ತೋರುತ್ತದೆ.

ಇರಲಿ, ಆ ದಿನ ಆಫೀಸಿನ ಭಾರದಿಂದ ಸೋತ ದೇಹ, ಮಧ್ಯಾಹ್ನ ಊಟವಿಲ್ಲದೆ ಹಸಿದು, ಹೆಬ್ಬುಲಿಯಂತಿದ್ದ ಹೊಟ್ಟೆ, ರೋಗಿಗಳೊಡನೆ ಮಾತನಾಡಿ, ಮಾತನಾಡಿ ಹುಟ್ಟಿದ ತಲೆಶೂಲೆ, ನಾಳಿನ ರೇಶನ್ನಿಗೆ ಏನು ಗತಿ? ಎಂಬ ಯೋಚನೆಯಿಂದ ಕರಡಾದ ಮನಸ್ಸು – ಇಷ್ಟೆಲ್ಲಾ "ಅವಘಡ" ಗಳ ಸಂಗಡ ಮನೆಯನ್ನು ಪ್ರವೇಶಿಸುವಾಗ, ಮನೆಯಿಂದ ಹೊರಡುವ ಗೃಹಲಕ್ಷ್ಮಿಯನ್ನು ಕಂಡು ಮನಸ್ಸು ಕುದಿಯಿತು. ಡಾಕ್ಟರರು ಕಾಣುತ್ತಿದ್ದರೆ, "ಮಲೇರಿಯಾ" ಎಂದು ರೋಗ ನಿದಾನ ಹೇಳುವ ತರದಲ್ಲಿ ನಖಶಿಖಾದ್ಯಂತವೂ ಕ್ರೋಧದಿಂದ ನಡುಗಲಾರಂಭಿಸಿತು. ನಾಲಿಗೆ "ರಾಯಲ್ ಮೈಲಿ"ನ ರಭಸದಲ್ಲಿ ಓಡಲಾರಂಭಿಸಿತು. ಮತ್ತೆ ?. ನಂತರ ?. .

ನಂತರ ಏನು ಮಾಡಿದೆ ಎಂಬುದು ನಿಮಗೂ ತಿಳಿದಿದೆ.

× × × ×

ಮರುದಿನ "ನಮ್ಮ ಫ್ಯಾಮಿಲಿ" ಎಂಬ ದಿನ ಪತ್ರಿಕೆಯಲ್ಲಿ ದಪ್ಪವಾದ ಕಪ್ಪು ಅಕ್ಷರಗಳಿಂದ ಶಿರೋನಾಮೆಯಿತ್ತು—

"ಹೋಮ್ ಡಿಪಾರ್ಟನಲ್ಲಿ ವಾರ್ ಡಿಕ್ಲೇರ್ಡ್ !"

ಅರ್ಥಾತ್

ಮನೆಯೊಳಗೊಂದು ಮಹಾಯುದ್ಧ !

ಮಹಾಯುದ್ಧ ಪ್ರಾರಂಭವಾಗಿ ನಾಲ್ಕನೇ ದಿನ—

" ನಮ್ಮ ಫ್ಯಾಮಿಲಿ "ಯಲ್ಲಿನ ಅಗ್ರಲೇಖ—

" ಪರಿಸ್ಥಿತಿಯು ಭೀಕರವಾಗಿದೆ ಇತ್ತಂಡದವರೂ ಭಯಂಕರವಾಗಿ ಕಾದುತ್ತಿದ್ದಾರೆ. ಆದರೆ ಮೀಸೆ ಹೊತ್ತವರು ಸೋಲುವ ಸಂಭವವಿದೆಯೇ ?"

× × × ×

ಆರನೇ ದಿನ

" ಇಂದು ಪಾಕಾಗ್ರಹದಲ್ಲಿ ಇತ್ತಂಡಗಳೂ ಸೇರಿ, ಭಯಂಕರ ವಾಗ್ಯುದ್ಧ ವಾಯಿತು ಕೊನೆಗೆ ಮೀಸೆ ಹೊತ್ತವರು ತಮ್ಮ ಕೋಣೆಗೆ Withdrawn according to plan ಅರ್ಥಾತ್ ಶಿಸ್ತಿನಿಂದ ಹಿಂದೆ ಸರಿದರು."

× × × ×

ಅಲ್ಲವಯ್ಯಾ. ಎಷ್ಟು ದಿನಾ ಅಂತ ಕಾದಬಹುದು ? ಮನೆಯಲ್ಲಿ ಮಾತಿಲ್ಲ, ಸದ್ದಿಲ್ಲ ಎಂದಾದರೆ ಎಷ್ಟು ದಿನ ನೂಕಬಹುದು ? ಸತ್ಯಪ್ರಮಾಣ ಹೇಳುತ್ತೇನೆ – ಕದನದ ಎಂಟು ದಿನಗಳಲ್ಲಿ ನಾನಾದರೂ ಹತ್ತು – ಹದಿನಾರು ವಾಕ್ಯಗಳನ್ನು ಮಾತನಾಡಿದ್ದೇನೆ. ಆದರೆ ಸೀತಾ – ಅಬ್ಬಾ, ಹೆಂಗುಸಿನ ಗರ್ವವೇ ? – ತುಟಿ ಪಿಟ್ಟೆನ್ನಲಿಲ್ಲ, ಅಪ್ಪಿತಪ್ಪಿಯಾದರೂ ಒಂದು ಶಬ್ದ ಮಾತನಾಡಲಿಲ್ಲ.

ಇನ್ನೇನು ಮಾಡೋಣ ? .ಅಲ್ಲ. .ಇನ್ನೇನು ಮಾಡೋಣಾ ಅಂತ ?

ಸಾಯಂಕಾಲ ಶೇಖರ ಸಿಕ್ಕಿದ. ನನ್ನ ಅಳುಮೋರೆಯನ್ನು ಕಂಡು " ಏನಾಯಿತಯ್ಯ ಮಿತ್ರವರ್ಯ, ಏನು ವಿಚಾರ ?" ಅಂತ ಪ್ರಶ್ನಿಸಿದ.

ನಾನು ಮಾತನಾಡಲಿಲ್ಲ.

" ಏನಯ್ಯಾ . ಕೆಲಸಕ್ಕೆ ಕತ್ತರಿ ಬಿತ್ತೇ ?"

ಮಾತೆತ್ತಲಿಲ್ಲ.

" ಹೊಟ್ಟೆಗೆ ಕಲ್ಲು ಬಿತ್ತೇ ?"

ತಲೆಯನ್ನಲುಗಿಸಿದೆ

" ಮತ್ತೇನಯ್ಯಾ ? ಅಪ್ಪ ತೀರಿಹೋದರೇ ?"

" ಮೊದಲೇ ಹೋಗಿದ್ದಾರೆ'" ಅಂದೆ.

" ಮತ್ತೇನು ಮಹಾರಾಯಾ ?"

" ಏನು ಹೇಳಲಿ ಶೇಖರ? ನನ್ನ ಗ್ರಹಾಚಾರ! ಮನೆಯಲ್ಲಿ ಸೀತೆ ಯೊಂದಿಗೆ ಜಗಳವಾಡಿದೆ "

" ಅದೊಂದೇನು ಮಹಾ ? ನಾನು ಪ್ರತಿದಿನ ಕಡಿಮೆಯೆಂದರೆ ಹದಿನಾಲ್ಕು ಸಲ ನನ್ನ ಸೋನಿಯಾಳೊಂದಿಗೆ ಜಗಳವಾಡಿ, ಹದಿನೈದುಸಲ ರಾಜಿ ಯಾಗುತ್ತೇನೆ."

" ಛೆ ಅಂತಹ ಜಗಳವಲ್ಲ ಇದು ಭಯಂಕರವಾಗಿ ಜಗಳವಾಡಿದ್ದೇವೆ. ಎಂಟು ದಿನಗಳಾಯಿತು ಜಗಳವಾಡಿ. ಇನ್ನೂ ನಮ್ಮ ನಮ್ಮೊಳಗೆ ಮಾತಿಲ್ಲ."

" ಅರೇರೇ ಇದೇನು ಮೂರನೇ ಮಹಾಯುದ್ಧವೋ ?"

" ಹೂಂ ಹಾಗೆಂದು ತೋರುತ್ತಿದೆ "

" ಕಾರಣ ? ಈ ಸಲ ಯಾವ ಹುಡುಗಿಯ ಬೆನ್ನು ಹತ್ತಿದಿ ?"

" ಇಲ್ಲ ಮಹಾರಾಯ, ಯಾರ ಬೆನ್ನೂ ಹತ್ತಲಿಲ್ಲ ಮೊನ್ನೆ ಏನೋ ಸಿನೆಮಾಕ್ಕೆಂದು ಹೊರಟಿದ್ದಳು ಕೂಡದೆಂದು ಹೇಳಿ, ಕೋಣೆಯೊಳಗೆ ಹಾಕಿ, ಬಾಗಿಲೆಳೆದುಕೊಂಡೆ "

ಶೇಖರ ದಂಗಾಗಿ ಹೋದ " ಏನು ? ಸಿನೆಮಾಕ್ಕೆ ಹೊರಟವಳನ್ನು ಕೂಡದೆಂದು ತಡೆದೆಯೇ ?"

" ಹೂಂ "

" ಕೋಣೆಯೊಳಗೆ ಹಾಕಿದೆಯೇ ?"

" ಹೌದು "

" ಅದರ ಮೇಲೆ ಬಾಗಿಲೆಳೆದುಕೊಂಡೆಯೇ ?"

" ಹೌದಪ್ಪ ಹೌದು "

" ಇನ್ನೂ ನೀನು ಬದುಕಿದ್ದಿ ಹೇಳು ನನ್ನ ಸೋನಿಯಾ ಆಗಿದ್ದರೆ, ಪ್ರಥಮ ಅಪರಾಧಕ್ಕೆ ಮೂರು ತಿಂಗಳು ಸಜೆ, ಎರಡನೆಯದಕ್ಕೆ ಜನ್ಮ ಟಾಪು ; ಮೂರನೇಯದಕ್ಕೆ ಫಾಶೀ ಶಿಕ್ಷ– ಇಷ್ಟನ್ನೂ ವಿಧಿಸುತಿದ್ದಳು "

" ಹೌದು ಶೇಖರ, ಈ ಹೆಂಗುಸರೆಂದರೆ ದೆವ್ವಗಳು !" ಅಂದೆ.

" ಅಲ್ಲವಯ್ಯಾ, ಬ್ರಹ್ಮನು ಈ ಹೆಂಗುಸರನ್ನೇಕೆ ಸೃಷ್ಟಿಸಿದ್ದಾನೆ ಗೊತ್ತೇ ?"

" ಗಂಡಸರೆಂಬ ಪ್ರಾಣಿಗಳ ಜೀವ ಹಿಂಡಲಿಕ್ಕೆ !"

" ಭೇಷ್ !" ಅಂದೆ

"ಗಂಡನೆಂಬ ಚಂದ್ರನಿಗೆ ಹೆಂಗುಸೆಂಬುದು ಕೇತು – ಆಗಾಗ್ಯೆ ಗ್ರಹಣ ಹಿಡಿಸಲಿಕ್ಕೆ !"

"ಭಳಿರೇ !" ಅಂದೆ.

"ಗಂಡಸರ ಜೀವನಾಕಾಶದಲ್ಲಿ ಧೂಮಕೇತುಗಳು ಈ ಹೆಂಗುಸರು !"

"ಶಹಭಾಸ್ !" ಅಂದೆ.

"ಎಲ್ಲಿ Shake hands" ಅಂದ ಶೇಖರ

ಕೈ ಕುಲಕಿಸಿದೆ. "ಅದೆಲ್ಲ ಸರಿ ಶೇಖರ, ಆದರೆ ಮನೆಯೊಳಗಿನ ಮಹಾ ಯುದ್ಧವನ್ನು ನಿಲ್ಲಿಸಬೇಕಾಯಿತಲ್ಲ ! ಅದಕ್ಕೇನು ಉಪಾಯ ?"

ಐದು ನಿಮಿಷ, ಶೇಖರನು ತಲೆಯ ಮೇಲೆ ಕೈಗಳನ್ನು ಇಟ್ಟುಕೊಂಡು, ಕಣ್ಣುಗಳನ್ನು ಬಿಸ್ಕಟಾಂಬೋಡೆಯಷ್ಟು ವಿಶಾಲವಾಗಿ ತೆರೆದು, ಪಾಂಡವರ ಗುಹೆಯಷ್ಟೆ ಅಗಲವಾಗಿ ಬಾಯಿದೆರೆದು, ಆಫೀಸಿನ ಮಾಳಿಗೆಯ ಹಂಚುಗಳನ್ನು ಎಣಿಸತೊಡಗಿದ ಅರ್ಥಾತ್ ಯೋಚನಾಕ್ರಾಂತನಾದ

ತಟಕ್ಕನೆ ನೆಟ್ಟಗೆ ಎದ್ದು ಕುಳಿತ. "ರಾಮು ನನಗೊಂದು ಉಪಾಯ ತೋರಿಬಂದಿದೆ "

ಉತ್ಸುಕತೆಯಿಂದ "ಏನು ಶೇಖರ, ಹೇಳಿಬಿಡು" ಅಂದೆ.

"ನಿಲ್ಲು. ನಿಲ್ಲು ಅವಸರ ಮಾಡಬೇಡ ಅಕಸ್ಮಾತ್ ತಲೆಯೊಳಗೆ ಬಂದ ಆ ಆಲೋಚನೆ ಅಕಸ್ಮಾತ್ ತಲೆಯೊಳಗಿಂದ ಹಾರಿಹೋಗಬಹುದು."

ಸುಮ್ಮನೆ ಬಾಯಿ ಮುಚ್ಚಿ ಕೂತೆ

ಕೆಲವು ಕ್ಷಣಗಳಲ್ಲಿ ಶೇಖರನು ಸಮಾಧಿಯಿಂದ ಎಚ್ಚರನಾಗಿ "ನೋಡು, ನಾವು ಈ ಹೆಂಗುಸರಿಗೆ ಮಣಿಯಬಾರದು !" ಎಂದ.

ತಾತ್ಸಾರದಿಂದ "ಹಾಳಾಗಿ ಹೋಗು. ಇಷ್ಟೆಯೋ ಆ ನಿನ್ನ ಗಂಭೀರ ಯೋಚನೆಯ ಫಲ ? ಹೆಂಡತಿಗೆ ದಿವಸಕ್ಕೆ ಹದಿನಾರು ಸಲ ಸಾಷ್ಟಾಂಗ ವಂದನೆ ಮಾಡಿ, ಅವಳನ್ನು ಷೋಡಶೋಪಚಾರಗಳಿಂದ ಪೂಜಿಸಿ, ವಸ್ತ್ರಾಲಂಕಾರ ಗಳನ್ನಿತ್ತು ಸಂತೋಷಗೊಳಿಸಿ, ಅನಂತರ ಅವಳು ಬಡಿಸುವ ಆ ರೇಶನ್ ಅನ್ನಕ್ಕೆ ಬಕಪಕ್ಷಿಯಂತೆ ಕಾಯುತ್ತಿರುವ ನಾವು 'ಹೆಂಗುಸರಿಗೆ ಮಣಿಯಬಾರದು' ಎಂದರೆ ಠರಾವು ಮಾಡಿದರೆ, ಫಲ ಸಿದ್ಧಿಯಾದೀತೇ ?"

"ಠರಾವು ಮಾತ್ರವಲ್ಲ; ಆಚರಣೆಗೂ ತರಬೇಕು" ಅಂದ ಶೇಖರ.

" ಹೇಗೆ ?" ಅಂತ ಕೇಳಿದೆ.

" ನೋಡು, ಇವತ್ತು ರಾತ್ರಿ ನೀನು ಮನೆಗೆ ಹೋಗಬೇಡ. ನಮ್ಮ ಮನೆಯಲ್ಲೆ ಬಂದು ನಿಲ್ಲು."

" ಅಂದರೆ ನಾಳೆ ಬೇಳಿಗ್ಗೆ ನನ್ನ ಮನೆಯ ಬಾಗಿಲು ನನ್ನ ಮುಖದಲ್ಲೇ ಮುಚ್ಚಲಾದೀತು. ಅಲ್ಲ ಶೇಖರ; ನಾನು ಆ ದಿನ ನಿನಗೆ ಕಲಿಸಿದ ಪಾಠವನ್ನು ಇಂದು ನನಗೇನೇ ಕಲಿಸುತ್ತೀಯಲ್ಲ." *

" ಅದಲ್ಲ ಮಹಾರಾಯ ! ನೀನು ಈ ದಿನ ನಮ್ಮಲ್ಲೇ ಇದ್ದರೆ, ನಾಳೆ ಬೆಳಿಗ್ಗೆ ನಿನ್ನ ಆ ಸೀತಾ ನಿನ್ನನು ಕರದೊಯ್ಯಲು ಬಾರದಿದ್ದರೆ ನನ್ನ ಹೆಸರು ಶೇಖರನಲ್ಲ !"

" ಸೀತಾ ಕರೆದೊಯ್ಯಲು ಬರುವುದು ಕೈಯಲ್ಲಿ ದೊಣ್ಣೆ ಹಿಡಕೊಂಡೇ ?"

" ಅಲ್ಲ, ಷೋಡಶೋಪಚಾರ ಪೂಜಾ ಸಾಹಿತ್ಯಗಳನ್ನು ಸನ್ನಾಹಗೊಳಿಸಿ, ನಿನ್ನ ಕಾಲಡಿಯಲ್ಲಿ ಬಿದ್ದು, 'ನಾಥಾ ನಾನು ಪಾಪಿ, ನಿಮ್ಮನ್ನು ವೃಥಾ ತಾಪಗೊಳಿಸಿದೆ. ನನ್ನನ್ನು ಕ್ಷಮಿಸಿ' ಅಂತ ಅಂಗಲಾಚಿಕೊಳ್ಳದಿದ್ದರೆ, ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯ ಸಿಕ್ಕಿದ್ದು ಸುಳ್ಳಾದೀತು "

" ಹಾಗಾದರೆ ಹಾಗೆ ಮಾಡೋಣವೇ ?"

" ಅದನ್ನು ಕೇಳಬೇಕೇ ?"

" ಆದರೆ ಶೇಖರ, ನಿನ್ನ ಸೋನಿಯಾ "

ಗಹಗಹಿಸಿ ನಕ್ಕು ಶೇಖರನೆಂದ. " ಬಿಡೋ ಅವಳ ಸುದ್ದಿಯನ್ನು. ಅವಳಿಗೆ ಹೇಳಿದರಲ್ಲವೇ ಈ ವಿಚಾರವನ್ನು ? ನಿನ್ನನ್ನು ಸುದ್ದಿ ಇಲ್ಲದೆ, ನನ್ನ ಕೋಣೆಯಲ್ಲಿ ಅಡಗಿಸಿಡುತ್ತೇನೆ "

" ಆದರೆ ಎದೆ ಡವಡವಾ ಅನ್ನುತ್ತಿದೆ "

" ಅದು ಹಾರ್ಟ್ ಸ್ವಲ್ಪ ನಿತ್ರಾಣವಿರಬಹುದು. ನಾಳೆ ಒಂದು ಡೋಸ್ ಮದ್ದು ಕುಡಿ. ಕಾಸು ಏನೂ ಕೊಡಬೇಕಾಗಿಲ್ಲವಷ್ಟೆ ?"

" ಕಣ್ಣು ಮಸುಕಾಗುತ್ತಿದೆ. "

---

* " ಕಾನ್ವೆಂಟ್ ಗರ್ಲ್ " ನ " ಸೋನಿಯಾ – ಶೇಖರ " ದಲ್ಲಿ.

" ಪಿತ್ತಕಾಮಲೆ ಅದು , ಗಾಬರಿಯಿಲ್ಲ. ಅಲ್ಲವೋ ರಾಮು , ಎಂತಹ ಹೇಡಿ ಮನುಷ್ಯನೋ ನೀನು ?"

ಹೇಡಿ ; ನಾನು ಹೇಡಿ ?? ಮೊನ್ನೆ ರಾತ್ರಿ ಎರಡು ಗಂಟೆಯ ಸುಮಾರಕ್ಕೆ–ಮುನಿಸಿಪಾಲಟಿಯ ದೀಪಗಳೆಲ್ಲಾ ನಿದ್ದೆಹೋಗುತ್ತಿರಲು, ಕಣ್ಣಿಗೆ ಬೆರಳು ತೂರಿಸಿದರೂ, ಕಾಣದಂತಹ ಕತ್ತಲೆ ಇರಲು – ಏಕಾಂಗಿಯಾಗಿ ಹಂಪನಕಟ್ಟೆಯಿಂದ ಜೇಡಿಗುಡ್ಡೆಯ ತನಕ " ರಾಮು – ರಾಮು " ಎಂದು ಜಪಿಸುತ್ತ ಕಣ್ಮುಚ್ಚಿಕೊಂಡು ಬಂದವನು ನಾನು ಹೇಡಿಯೇ ? ಕಳೆದ ಮಹಾಯುದ್ಧದಲ್ಲಿ ಅಮೇರಿಕನರು ಜಪಾನಿನ ಮೇಲೆ ಅಟಾಂಬಾಂಬು ಹಾಕುತ್ತಿರುವ ಆ ಭಯಂಕರ ಪ್ರಸಂಗದಲ್ಲೂ ನಾನು ಮನೆಯಲ್ಲಿ ಸುಖವಾಗಿ ನಿದ್ರಿಸಿರಲಿಲ್ಲವೇ ? ನಾನು ಹೇಡಿಯೇ ? ಮಹಾತ್ಮಾ ಗಾಂಧಿಗಳವರ ಕೊಲೆಯಾದುದನ್ನು ಕೇಳಿದ ಕೂಡಲೇ, ಆಫೀಸಿನ ಬಾಗಿಲನ್ನು ಮುಚ್ಚಿ ನೆಟ್ಟಗೆ ಮನೆಗೆ ಧಾವಿಸಿ, ಅಟ್ಟದ ಮೇಲಿಟ್ಟ ಹದನಾದ ಚೂರಿಯನ್ನು ಹುಡುಕಿ, ಆ ಕೊಲೆಗಾರನ ರುಂಡವನ್ನು ಚೆಂಡಾಡುತ್ತೇನೆಂದು ಡಿಲ್ಲಿಗೆ ಹೊರಟ ನಾನು, ಹೇಡಿಯೇ ? ಅಂದು ಸೀತಾ ತಡೆಯದಿದ್ದರೆ, ನಿಜವಾಗಿಯೂ ಡಿಲ್ಲಿಯವರೆಗೆ ಹೋಗುತಿದ್ದೆನೋ ಏನೋ ! ರೈಲ್ವೆ ಸ್ಟೇಶನ್ನಿನ ವರೆಗಂತೂ ಖಂಡಿತ ಹೋಗುತ್ತಿದ್ದೆ. ಅಂತಹ ನಾನು ಹೇಡಿಯೇ "

ಎದ್ದು ನಿಂತೆ.

" ಶೇಖರ ನಾನು ಹೇಡಿಯಲ್ಲ. ಹೆಂಡತಿಗೆ ಮಣಿಯುವುದೂ ಇಲ್ಲ . ಇಂದು ನಾನು ಮನೆಗೆ ಹೋಗುವುದಿಲ್ಲ. ನಿಮ್ಮ ಮನೆಗೆ ಬರುತ್ತೇನೆ. ನೀನು ನನ್ನ ಗುರು !" ಅಂದೆ

ಶೇಖರ ಮೌನವಾಗಿ ನನ್ನ ಕೈಯನ್ನು ಕುಲಕಿಸಿದ.

× × × ×

ರಾತ್ರೆ. ಗಂಟೆ ಒಂಭತ್ತಾಗಿರಬಹುದು ಶೇಖರ ತನ್ನ ಕೋಣೆಯಲ್ಲಿ ನನ್ನನ್ನು ಕುಳ್ಳಿರಿಸಿ, ಬಾಗಿಲೆಳೆದುಕೊಂಡು, ನನ್ನ ರಾತ್ರೆಯ ಫಲಾಹಾರಕ್ಕೆ ಎರಡು ಬಾಳೆಹಣ್ಣುಗಳನ್ನಾದರೂ ತರುತ್ತೇನೆಂದು ಬೀದಿಗಿಳಿದಿದ್ದ. ಅವನ ಹೆಂಡತಿ ಸೋನಿಯಾ ಒಳಗೆ ಅಡಿಗೆಯ ಕೋಣೆಯಲ್ಲಿ ಇದ್ದಳೂಂತ ಕಾಣುತ್ತದೆ. ನಾನು ಕೋಣೆಯೊಳಗಿದ್ದ ಸುದ್ದಿಯೇ ಅವಳಿಗೆ ತಿಳಿದಿರಲಿಲ್ಲ. ಅಂತಹ ಎಲ್ಲಾ ವಿಚಾರಗಳಲ್ಲಿ ಶೇಖರ ಬಲು ಚತುರ !

ಕೋಣೆಯೊಳಗೆ ಕತ್ತಲೆ. ದೀಪ ಹಚ್ಚಿದರೆ ಸೋನಿಯಾಳಿಗೆ ನನ್ನ ಸುಳಿವು ತಿಳಿಯಬಹುದೆಂದು ದೀಪ ಹಚ್ಚಲಿಲ್ಲ. ಸಿಗರೇಟನ್ನಾದರೂ ಎಳೆಯುವೆ ನೆಂದರೆ ಕಡ್ಡಿ ಗೀರಬೇಕಲ್ಲ, ಸೋನಿಯಾಳ ಕಿವಿಗೆ ಬಿದ್ದರೋ? ನಾನು ಕುಳಿತ ಕುರ್ಚಿಯಂತೂ ತಗಣೆಗಳ ಬೀಡಾಗಿತ್ತು. ಅಲುಗಾಡಲು ಕೂಡಾ ಹೆದರಿಕೆ. ಸಾಲದ್ದಕ್ಕೆ ನುಸಿಗಳ ಸುಮಧುರ ಗಾಯನ ಬೇರೆ ಗರುಡ ಪುರಾಣದ ನರಕ ಶಿಕ್ಷೆಯೇ ಇದೆಂದು ಭಾವಿಸಿದೆ

ಅಷ್ಟರಲ್ಲಿ ಮನೆಯ ಹೊರ ಬಾಗಿಲು ತಟ್ಟಿದ ಸದ್ದಾಯಿತು ಸೋನಿಯಾ ಅಡುಗೆ ಕೋಣೆಯೊಳಗಿಂದಲೇ "ಯಾರದು?" ಎಂದು ಗರ್ಜಿಸಿದಳು.

ಮಾತಿಲ್ಲ, ಆದರೆ ಪುನಃ ಬಾಗಿಲು ತಟ್ಟಿದ ಸದ್ದು

ಬಾಗಿಲು ತಟ್ಟಿದವರನ್ನು ಶಪಿಸುತ್ತಾ, ಸೋನಿಯಾ ಹೊರ ಬಂದು, ಬಾಗಿಲು ತೆರೆದಳು

ಅವರ ಸಂಭಾಷಣೆಯು ಕೋಣೆಯೊಳಗಿದ್ದ ನನ್ನ ಕಿವಿಗಳಿಗ ಸ್ಪಷ್ಟವಾಗಿ ಕೇಳಿಸುತಿತ್ತು

"ಯಾರದು? ಓಹೊ, ಸೀನೆನೇ? ಬಾರಮ್ಮಾ ಬಾ ಏನು ಅಪರೂಪವಾಗಿ ಬಂದೆ, ಗೆಳತಿ?" ಸೋನಿಯಳ ಧ್ವನಿ.

"ಏನಿಲ್ಲ ಸೋನಿಯ, ನಿನ್ನೊಡನೆ ಮಾತನಾಡಿ ಹೋಗೋಣ ಅಂತ ಬಂದೆ ಹೌದೇ ಸೋನಿಯಾ, ನನ್ನ ಯಜಮಾನರೇನಾದರೂ ಇಲ್ಲಿಗೆ ಬಂದಿದ್ದರೇ?" ಸ್ತ್ರೀ ಧ್ವನಿ! ಯಾರೋ ಸೋನಿಯಳ ಗೆಳತಿ ಇರಬೇಕು

"ಇಲ್ಲ ಇಲ್ಲಿಗೆ ಬರಲಿಲ್ಲ ಇನ್ನೂ ಮನೆಗೆ ಬಂದಿಲ್ಲವೇ?"

"ಯಾವಾಗಲೂ ಎಂಟು ಗಂಟೆಯೊಳಗೆ ಬರುತ್ತಾರೆ ಇವತ್ತೇನೋ ಬಂದಿಲ್ಲ. ನನ್ನೊಡನೆ ಕೋಪಗೊಂಡು ಹೋದರೇನೋ ಅನ್ನಿಸುತ್ತದೆ"

"ಏಕೆ ನಿನ್ನೊಡನೆ ಕೋಪ?"

"ಅಲ್ಲಾ, ಮೊನ್ನೆ ಸಿನಿಮಾಕ್ಕೆ ಹೊರಟಿದ್ದೆ. ಬೇಡಾ ಅಂತ ತಡೆದು, ಹೋಗಬಿಡಲಿಲ್ಲ ನಂತರ ಅವರೊಡನೆ ನಾನು ಮಾತನಾಡಲಿಲ್ಲ. ಇದಕ್ಕಾಗಿ ಕೋಪದಿಂದ ಮನೆ ಬಿಟ್ಟು ಹೋದರೇನೋ!" ಯಾರು? ನನ್ನ ಸೀತಾ!

ಸೋನಿಯಾ ಗಹಗಹಿಸಿ ನಕ್ಕಳು "ಅಲ್ಲವೇನೇ! ಈ ಗಂಡಸರ ಹೆಂಗುಸರೊಡನೆ ಎಷ್ಟೆಂದು ಜಗಳವಾಡಿಯಾರು? ಕೋಪ ಬಂದರೆ, ಮನೆ-

ಬಿಟ್ಟು ಹೋಗುವರೆಂದೆಣಿಸಿದೆಯಾ? ಅಯ್ಯೋ ಹುಚ್ಚು ಹುಡುಗಿ! ಎಲ್ಲಾದರೂ ಉಂಟೇನೇ? ಅಲ್ಲ, ನನಗೆ ಮದುವೆಯಾಗಿ ಮೂರು ವರ್ಷವಾಯಿತು. ಈ ಮೂರು ವರ್ಷಗಳಲ್ಲಿ ನನ್ನ ಗಂಡ ನನ್ನೊಡನೆ ಜಗಳಾಡಿ, ಕಡಿಮೆಯೆಂದರೆ ಹದಿನಾಲ್ಕುಸಲ ಮನೆಬಿಟ್ಟು ಹೋಗಿದ್ದಾರೆ ಮನೆಯ ಮೆಟ್ಟಲಲ್ಲಿ ನಿಂತು, ಅಜ್ಜ – ಮುತ್ತಜ್ಜಂದಿರ ಆಣೆಹಾಕಿ, ಇನ್ನು ಈ ಮನೆಗೆ ಕಾಲಿಡುವುದಿಲ್ಲವೆಂದು ಹೋಗಿದ್ದಾರೆ . ."

ಸೀತಾ ಉತ್ಸುಕತೆಯಿಂದ ಕೇಳಿದಳು. " ನಂತರ? "

"ನಂತರ ಏನು? ಒಂದು ರಾತ್ರೆ ಹೋಟೆಲಲ್ಲಿ ಉಳಿದುಕೊಂಡು, ಮನೆಗೆ ಬಂದು, ವ್ಯೆಯಾರದಿಂದ 'ಹೌದೇನೆ, ಕಾಫಿಯಾಯಿತೇನೇ?' ಅಂತ ಕೇಳಿದ್ದಾರೆ ಇಂತಹ ಗಂಡಸರಿಗೆ ಹೆದರುವುದೇನೇ?"

" ಹೆದರುವುದಲ್ಲಮ್ಮಾ "

" ಹೆದರುವುದಲ್ಲದಿದ್ದರೆ ಮತ್ತೇನು? ಇಂತಹ ಗಂಡಸರಿಗೆ ಬುದ್ಧಿ ಬರ ಬೇಕಾದರೆ ಏನು ಮಾಡಬೇಕು ಗೊತ್ತೇ?"

" ನೀನೇನು ಮಾಡಿದ್ದಿ? ಹೇಳು."

"ಬೆಳಿಗ್ಗೆ ಆ ಗಂಡ ಮನೆಗೆ ಬರುವಾಗ್ಯೆ ಒಂದು ದೊಣ್ಣೆ ಕೈಯಲ್ಲಿ ಹಿಡಕೊಂಡು "

ಹೇ ಭಗವಾನ್, ಏನಿದು ಗ್ರಹಚಾರ! ಮ್ಯೆ ಬೆವರಿನಿಂದ ತೊಯ್ದಿದೆ.

" ಭದ್ರಕಾಳಿಯಂತೆ ಕಣ್ಣುಗಳನ್ನು ಕೆಂಪು ಮಾಡಿ "

ಪರಮಾತ್ಮಾ, ಏನು ಬುದ್ಧಿ ಕಲಿಸುತಿದ್ದಾಳೆ ಈ ಹಿಡಿಂಬೆ ನನ್ನ ಸೀತೆಗೆ, ಸೀತೆಯಾದರೂ ಕಿವಿಗಳನ್ನು ಅಗಲವಾಗಿ ಮಾಡಿಕೊಂಡು, ಕೇಳುತ್ತಿದ್ದಾಳಲ್ಲ! ಹಾಕೇ ಬೆರಳು ಕಿವಿಗಳಿಗೆ ಸೀತಾ!

" ಆ ಗಂಡನೊಡನೆ ಕೇಳಬೇಕು.. ."

" ಏನೆಂದು?" ಅಂತ ಪ್ರಶ್ನಿಸಿದಳು ಸೀತಾ.

" ಏನ್ರೀ? ಎಲ್ಲಿಗೆ ಹೋಗಿದ್ದಿರಿ ನಿನ್ನೆ ರಾತ್ರೆ? ಹಾಗೆ ರಾತ್ರೆಯಲ್ಲಾ ಯಾರ್‍ಯಾರ ಸಂಗಡ ಚಕ್ಕಂದವಾಡುತ್ತಾ ಕುಳಿತು, ಬೆಳಿಗ್ಗೆ ಮನೆಗೆ ಬಂದು, ನಮ್ಮ ಮೇಲೆ ದರ್ಪ ತೋರಿಸಲು ನಾವೇನು ನಿಮ್ಮ ಕೂಲಿಯಾಳುಗಳೇ? ಹೇಳ್ರೀ, ಎಲ್ಲಿಗೆ ಹೋಗಿದ್ದಿರಿ. .."

ಅಯ್ಯೋ ವಿಧಿಯೇ! ಇನ್ನೇನು ಗತಿ! ಶೇಖರನ ಮಾತನ್ನು ನಂಬಿ ಮೋಸಹೋದೆನಲ್ಲ!

ಸೋನಿಯಾ ಮತ್ತೂ ಮುಂದುವರಿಸಿದಳು. “ಅಷ್ಟಕ್ಕೂ ಕೇಳದಿದ್ದರೆ ಕೈಯಲ್ಲಿರುವ ದೊಣ್ಣೆಯನ್ನು . .”

ನಂತರ ಕೇಳಲಾಗಲಿಲ್ಲ. ಸೀತಾ ದೊಣ್ಣೆ ಹಿಡಿದು ಹೊರಟರೆ, ಜಗತ್ತಿನ ಪುರುಷರೆಲ್ಲ ಕಸಿವಿಸಿಗೊಂಡಾರು! ಏನು ಮಾಡಲಿ?

ಫಕ್ಕನೆ ತಲೆಗೊಂದು ಯೋಚನೆ ಹೊಳೆಯಿತು. ಕಿಸೆಯಲ್ಲಿದ್ದ ಟವೆಲನ್ನು ಬಾಯಿಯೊಳಗೆ ತುರುಕಿಸಿಕೊಂಡೆ ಹತ್ತಿರವಿದ್ದ ಶೇಖರನ ಧೋತರವನ್ನು ಹರಿದು ಮೈಗೆ ಸುತ್ತಿಕೊಂಡು, ನನ್ನನ್ನು ನಾನೇ ಕುಳಿತಿದ್ದ ಕುರ್ಚಿಗೆ ಬಿಗಿದುಕೊಂಡೆ. ನರಳಲಾರಂಭಿಸಿದೆ

ಮೊದಮೊದಲು ಅವರಿಗೆ ಕೇಳಿಸಲಿಲ್ಲವೆಂದು ತೋರುತ್ತದೆ. ನನ್ನ ನರಳುವಿಕೆಯು ಸ್ವಲ್ಪ ಬಲವಾಗಲು ಸೀತೆಯ ಕಿವಿಗೇ ಮೊದಲು ಬಿತ್ತು

“ಏನೇ ಅದು ಒಳಗೆ?” ಅಂತ ಪ್ರಶ್ನಿಸಿದಳು ಸೀತಾ

“ಏನಿಲ್ಲ, ಬೆಕ್ಕಿನ ಮರಿ ಕೋಣೆಯೊಳಹೊಕ್ಕಿದೆಯೋ ಏನೋ? ಓಡಿಸುತ್ತೇನೆ” ಅಂನಂದು, ದೀಪವನ್ನು ಹಿಡಕೊಂಡು ಬಂದು, ಬಾಗಿಲು ನೂಕಿ, “ಶೂssss ಬಿಲ್ಲಿ!” ಅಂದಳು ಸೋನಿಯಾ ಅಲ್ಲೇ ತಟಸ್ಥಳಾದಳು.

ಅವಳ ಬೆನ್ನ ಹಿಂದಿನಿಂದ ಇಣುಕುತಿದ್ದ ಸೀತಾ ಸ್ತಂಭಿತಳಾದಳು

ಐದು ನಿಮಿಷ ನಾನು ಕಣ್ಣು ಪಿಳಿಪಿಳಿಮಾಡಿ, ನೋಡುತಿದ್ದೆ

ರುಮ್ಮನೆ ಓಡಿ, ಸೀತಾ ಒಳಬಂದಳು. ಬೇಗ ಬೇಗನೆ ನನ್ನ ಮೈಯನ್ನು ಸುತ್ತಿದ್ದ ಕಟ್ಟುಗಳನ್ನು ಬಿಚ್ಚುತ್ತಾ “ಏನ್ರೀ ಇದು?” ಅಂದಳು.

ಬಾಯೊಳಗೆ ತೂರಿಸಿದ್ದ ಟವೆಲನ್ನು ತೆಗೆದು, “ಏನೆನ್ನಲಿ ಸೀತಾ? ಆ ಶೇಖರ. ಅವನಿಗೆ ಹುಚ್ಚು ಹಿಡಿದಿದೆ. ನನ್ನನ್ನು ಕಾಳಿಕಾದೇವಿಗೆ ಬಲಿ ಕೊಡುವನಂತೆ. ಅದಕ್ಕೆ ಇಲ್ಲಿಗೆ ಕಂಡು, ಈ ಕುರ್ಚಿಗೆ ಬಿಗಿದು ಇಟ್ಟಿದ್ದಾನೆ ...”

“ಏನ್ರೀ ಅಬದ್ಧ, ಬಾಯಿಮುಚ್ಚಿ!” ಅಂದಳು ಸೋನಿಯಾ.

“ಏಕೆ ಬಾಯಿ ಮುಚ್ಚಲಿ?” ನಾನು ಗರ್ಜಿಸಿದೆ. “ನೀವು ಗಂಡ–ಹೆಂಡಿರಿಬ್ಬರಿಗೂ ಹುಚ್ಚು ಹಿಡಿದಿದೆ ಇವತ್ತು ಕಾಳಿಕಾದೇವಿಗೆ ನರಬಲಿ ಇತ್ತರೆ, ಅವಿತಿಟ್ಟ ಗುಪ್ತಧನವು ಸಿಗುವುದಂತೆ”

" ಆಂ " ಅಂದು ಕಿವಿ ನಿಗುರಿಸಿದಳು ಸೀತಾ.

" ಹೂಂ ಆ ಶೇಖರ ಬಾಳೆಹಣ್ಣು ತರಲಿಕ್ಕೆ ಹೋಗಿದ್ದಾನೆ ಬಲಿ ಯಾಗುವವನಿಗೆ ಹೊಟ್ಟೆತುಂಬಾ ಬಾಳೆಹಣ್ಣು ತಿನ್ನಿಸಿ, ಆನಂತರ ಅವನ ಕೊರಳು ಕೊಯ್ಯಬೇಕಂತೆ. ಯಾರೋ ಒಬ್ಬ ಸನ್ಯಾಸಿ ಅವನಿಗೆ ಹೇಳಿದ್ದ. ಅದನ್ನು ನಂಬಿ, ಆ ಶೇಖರ ನನ್ನನ್ನು....ಸೀತಾ, ನೀನು ಬಾರದಿರುತಿದ್ದರೆ. ನನ್ನ ವಧೆಯಾಗುತಿತ್ತು." ಅಂದೆ.

ಅಷ್ಟರಲ್ಲಿ ಶೇಖರನ ಪ್ರವೇಶವಾಯಿತು

" ಅದೋ ಸೀತಾ. .ಶೇಖರ ಅವನ ಕೈಗಳಲ್ಲಿ ನೋಡೆ ..ಒಂದರಲ್ಲಿ ಬಾಳೆ ಹಣ್ಣುಗಳು ಇನ್ನೊಂದರಲ್ಲಿ ಚೂರಿ"... ಸೀತೆಯ ಕೈಹಿಡಿದು ಬಾಗಿಲಿನತ್ತ, ಸರಿದೆ. " ಸೀತಾ, ಆ ನಿನ್ನ ಗೆಳತಿಯನ್ನು ನೋಡಿಕೋ, ನಾನು ಶೇಖರನನ್ನು ನೋಡಿಕೊಳ್ಳುತ್ತೇನೆ ಎಲ್ಲಾದರೂ ದಬಕ್ಕನೆ ಮೈಮೇಲೆ ಹಾರಿಬಿಟ್ಟಾನು."

ಬಾಗಿಲು ತೆರೆದು ಬೀದಿಗಿಳಿದೆವು.

ಆಶ್ಚರ್ಯದಿಂದ ಅವಾಕ್ಕಾದ ಶೇಖರನ ನಾಲಿಗೆ ಸಡಿಲಿಸಿತೆಂದು ತೋರುತ್ತದೆ " ಮಿತ್ರಾ ರಾಮು ಬಾಳೆಹಣ್ಣು " ಅಂದ.

" ಅದನ್ನು ನೀವೇ ತಿಂದು; ತೇಗಿ." ಅಂದಂದು, ಶೇಖರನ ಮನೆಗೆ ಬೆನ್ನು ಹಾಕಿ, ಸೀತೆಯ ಕೈ ಹಿಡಿದು, ನಮ್ಮ ಮನೆಯತ್ತ ತಿರುಗಿದೆ.

ನಾನು ಬದುಕಿದೆ ! ಆದರೆ ಶೇಖರನೋ ???

———o———

# ಶಾರದಾ ಪ್ರಕಟನಾಲಯದ ಪ್ರಕಟನೆಗಳು



* ಪ್ರತಿಗಳು ಮುಗಿದಿವೆ.

| | | | | |
|---|---|---|---|---|
| ೨೬. | ಮದುವೆ ಮಾಡಿ ನೋಡು | ೧ | ೦ | ೦ |
| ೨೭. | ಕಲ್ಯಾಣಿ | ೨ | ೮ | ೦ |
| ೨೮. | ನೀ ನನ್ನ ಮುಟ್ಟಬೇಡ | ೧ | ೮ | ೦ |
| ೨೯. | ನನ್ನ ದೇವರು (‘ಕುವೆಂಪು’ ರವರ ಕಥಾಸಂಕಲನ) | ೧ | ೪ | ೦ |
| ೩೦. | ಕಾಮಿನಿ – ಕಾಂಚನ | ೧ | ೮ | ೦ |
| ೩೧. | ಜನಿವಾರ ಮತ್ತು ಶಿವದಾರ | ೧ | ೮ | ೦ |
| ೩೨. | ಮಲ್ಲಿ | ೧ | ೮ | ೦ |
| ೩೩. | ಆನಂದ ಲಹರಿ | ೦ | ೧೨ | ೦ |
| ೩೪. | ಸೀತಾ – ರತ್ನ | ೧ | ೧೨ | ೦ |
| ೩೫. | ನಾಡಿಗೇರರ ನಗೆಬರಹಗಳು ೨ | ೧ | ೮ | ೦ |
| ೩೬. | ನಾನು ಪೋಲೀಸನಾಗಿದ್ದೆ | ೧ | ೮ | ೦ |

